# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಈ ಸಂಚಿಕೆಯಲ್ಲಿ "ಕಾಕೋಲೂಕೀಯ" ಎಂಬ "ಪಂಚತಂತ್ರ" ಕಥೆಗಳ ಮೂರನೇ ಭಾಗವು ಪ್ರಾರಂಭವಾಗಿದೆ. ಕಾಗೆ ಮತ್ತು ಗೂಗೆಗಳೊಳಗೆ ನಡೆದ ವ್ಯವಹಾರಗಳಿಗೆ ಸಂಬಂಧಿಸಿದ ಕತೆಗಳು ಇವುಗಳಲ್ಲಿವೆ. ಉಳಿದ ಎಂದಿನಂತಹ ಕಥೆಗಳಲ್ಲಿ "ಮಾಲೀಸ್ ಮಾಡು" ವಾಡಿಕೆಗೆ ಬಂದ ಪಡಿನುಡಿಗೆ ಸಂಬಂಧಿಸಿದ್ದು; ವ್ಯವಹಾರದಲ್ಲಿರುವ ನಾಜೂಕಿಗೆ ಸೇರಿದ್ದು. "ಪಂಚಾಯಿತಿಯ ಫಲ", "ಬೀಗುವ ರೋಗ" ಕಥೆಗಳು ಮನಸ್ಸಿಗೆ ನಾಟುವಂತಹವು. "ಚರಿತಾರ್ಥರು" ಎಂಬ ಕಥೆ ಹೃದಯ ತುಂಬಿಬರುವಂತಹ ಉದಾತ್ತತೆಯಿಂದ ಕೂಡಿದೆ. ರಾಮಾಯಣದ ಯುದ್ಧದ ಮಧ್ಯದಲ್ಲಿ ಹೊರಟ ಹನುಮಂತನ ಸಾಹಸಕ್ಕೆ ಸಂಬಂಧಿಸಿದ ಕಥೆ "ವೀರ ಹನುಮಾನ್" ಎಂಬುದಕ್ಕೆ ಸಾರ್ಥಕವೆನಿಸುವಂತಹುದೆಂದು ಓದುಗರು ಮನಗಾಣಬಹುದು.

ಸಂಪುಟ : ೫೮ ಮೇ '೭೭ ಸಂಚಿಕೆ : ೫

ಬಿಡಿ ಪ್ರತಿ ರೂ. ೧-೫೫ :: ವಾರ್ಷಿಕ ಚಂದಾ ರೂ. ೧೫-೦೦









ಆರ್ತೋ ವಾ ಯದಿವಾ ದೃಪ್ತಃ
ಪರೇಷಾಂ ಶರಣಾಗತಃ
ಅರಿಃ ಪ್ರಾಣಾನ್ಪರಿತ್ಯಜ್ಯ
ರಕ್ಷಿತವ್ಯಃ ಕೃತಾತ್ಮನಾ ೧.

ಕಷ್ಟದಲ್ಲಿರುವವನಾದರೂ ಗರ್ವಿಷ್ಠನಾದರೂ ಶತ್ರು ಶರಣುಬೇಡಿದರೆ ದೃಢನಿಶ್ಚಯದಿಂದ ಪ್ರಾಣ ಕೊಟ್ಟಾದರೂ ರಕ್ಷಿಸಬೇಕು.

ಸ ಚೇದ್ಭಯಾದ್ವಾ ಮೋಹಾದ್ವಾ
ಕಾಮಾದ್ವಾಪಿ ನ ರಕ್ಷತಿ
ಸ್ವಯಾ ಶಕ್ತ್ಯಾ ಯಥಾ ಸತ್ವಂ
ತತ್ಪಾಪಂ ಲೋಕ ಗರ್ಹಿತಂ ೨.

ಭಯದಿಂದಾಗಲೀ, ಅಜ್ಞಾನದಿಂದಾಗಲೀ, ಕಾಮದಿಂದಾಗಲೀ ಶರಣು ಬಂದವನನ್ನು ತನ್ನಿಂದಾದಷ್ಟು ಶಕ್ತಿಯಿಂದ ರಕ್ಷಿಸದೆ ಹೋದರೆ ಅವನು ಲೋಕನಿಂದೆಗೆ ಗುರಿಯಾಗುವನು.

ವಿನಷ್ಟಃ ಪಶ್ಚತಸ್ತಸ್ಯ
ರಕ್ಷಿಣಃ ಶರಣಾಗತಃ
ಆದಾಯ ಸುಕೃತಂ ತಸ್ಯ
ಸರ್ವಂ ಗಚ್ಛೇದರಕ್ಷಿತಃ ೩.

ಶರಣಾಗತನನ್ನು ರಕ್ಷಿಸದೆಬಿಟ್ಟವನು ಪೂರ್ವದಲ್ಲಿ ಮಾಡಿದ ಪುಣ್ಯಗಳನ್ನೆಲ್ಲಾ ಕಳೆದುಕೊಳ್ಳುವನು.

---

## ಶರಣಾಗತ ರಕ್ಷಣೆ





# ಕಾಕೋಲೂಕೀಯ

೪೩

ಮಿತ್ರಲಾಭದ ಕಥೆಗಳನ್ನು ಮುಗಿಸಿದ ಮೇಲೆ ವಿಷ್ಣು ಶರ್ಮನು ರಾಜಕುಮಾರರೊಂದಿಗೆ ಹೀಗೆಂದನು :

"ಕೆಲವುಸಾರಿ ಶತ್ರುವಾದವನು ಮಿತ್ರನಾಗಿ ನಟಿಸಿ ಕೊಂಡಿರುವ ಸಂಭವವೂ ಉಂಟು. ಆದುದರಿಂದ ಹೊಸಬರ ಮೈತ್ರಿಯನ್ನು ಒಮ್ಮೆಲೇ ನಂಬಬಾರದು. ಕಪಟಮಿತ್ರನ ಸಹಾಯದಿಂದ ಕಾಗೆಗಳು ಗೂಗೆಗಳ ಮನೆಯನ್ನು ಸುಟ್ಟು ಬೂದಿ ಮಾಡಿದುವಷ್ಟೆ ?" ಎಂದನು.

"ಅದು ಹೇಗೆ ? ಅದೇನು ಕಥೆ ?" ಎಂದು ರಾಜಕುಮಾರರು ಕೇಳಿದರು. ವಿಷ್ಣುಶರ್ಮನು ಅವರಿಗೆ 'ಕಾಕೋಲೂಕೀಯ' ಎಂಬ ಕಾಗೆ ಮತ್ತು ಗೂಗೆಗಳ ಕಥೆಗಳನ್ನು ಹೇಳತೊಡಗಿದನು :

* * *

ದಕ್ಷಿಣದೇಶದಲ್ಲಿದ್ದೊಂದು ದೊಡ್ಡ ಅರಣ್ಯದ ನಡುವೆ ಮಹಾ ವಟವೃಕ್ಷವೊಂದಿತ್ತು. ಅಸಂಖ್ಯ ಶಾಖೋಪ ಶಾಖೆಗಳಿಂದ, ಯಥೇಚ್ಛವಾಗಿ ಇಳಿಬಿಟ್ಟ ಬೀಳಲು ಗಳಿಂದ ವೃಕ್ಷರಾಜದಂತೆ ಕಂಗೊಳಿಸುತ್ತಿದ್ದ ಅದರಲ್ಲಿ ಮೇಘವರ್ಣವೆಂಬ ಕಾಗೆಗಳ ರಾಜನಿದ್ದ.

ಅಲ್ಲಿಗೆ ಒಂದು ಹರದಾರಿ ದೂರದಲ್ಲಿರುವ ಗುಡ್ಡದ ಇಳಿಜಾರಿನಲ್ಲಿ, ಗುಹೆಯೊಳಗೆ ಅರಿಮರ್ದನ ವೆಂಬ ಗೂಗೆಗಳ ರಾಜ ತನ್ನ ಅನುಚರರೊಂದಿಗೆ ವಾಸವಾಗಿತ್ತು.

ಅದಕ್ಕೆ ಕಾಗೆರಾಜನೊಂದಿಗೂ ಇತರ ಕಾಗೆ ಗಳೊಂದಿಗೂ ಬದ್ಧವೈರವಿದ್ದಿತು. ಗೂಗೆ ರಾಜನೂ ಇತರ ಗೂಗೆಗಳೂ ಕಾಗೆಗಳನ್ನು ಎಲ್ಲಿ ಕಂಡರೂ ಕುಕ್ಕಿ ತಿವಿದು ಕೊಂದುಬಿಡುತ್ತಿದ್ದುವು. ಆ ಕಾರಣ ದಿಂದಾಗಿ ವಟವೃಕ್ಷದ ಸುತ್ತಲೂ ಯಾವಾಗಲೂ ಕೆಲವು ಕಾಗೆಗಳು ಸತ್ತುಬೀಳುತ್ತಿದ್ದವು. ಇದನ್ನು ನೋಡಿ ಸಹಿಸಲಾಗದೆ, ಒಂದುದಿನ ಕಾಗೆ ರಾಜ ತನ್ನ ಮಂತ್ರಿಗಳನ್ನೂ ಇತರ ಸಲಹಾದಾರರನ್ನೂ ಸೇರಿಸಿ ಹೀಗೆಂದು ಹೇಳಿತು :

"ಕಾಕವೃದ್ಧರೇ, ನಮ್ಮ ಕಷ್ಟಗಳ ನಿವೃತ್ತಿಗೆ ತಕ್ಕ ಯೋಚನೆ ಮಾಡಲಿಕ್ಕೆ ನಿಮ್ಮನ್ನೆಲ್ಲಾ ಕರೆಸಿದ್ದೇನೆ. ರಾತ್ರಿಯ ಹೊತ್ತಿನಲ್ಲಿ ನಾವು ನಿದ್ದೆಯಲ್ಲಿರುವಾಗ, ಶತ್ರುಗಳಿಂದ ನಮಗಾಗುವ ಹಾನಿ ಎಂತಹುದೆಂದು ನಿಮಗೆಲ್ಲಾ ಗೊತ್ತಿದೆ. ಹಗಲು ಹೊತ್ತಿನಲ್ಲಿ ಗೂಗೆ

ಗಳಿಗೆ ಕಣ್ಣು ಕಾಣುವುದಿಲ್ಲವೆಂಬುದೂ ನಿಜವೇ. ಆದರೆ ಆ ಸಮಯದಲ್ಲಿ ಅವುಗಳು ತಮ್ಮ ಪರ್ವತ ಗುಹೆಯೊಳಗೆ ಭದ್ರವಾಗಿರುತ್ತವೆ. ನಾವು ಅದರೊಳಗೆ ಹೋಗಲಾರೆವು. ಗುಹೆಯೊಳಗೆ ಹೋದರೂ ಕತ್ತಲೆಯಲ್ಲಿ ಅವು ಇರುವ ಸ್ಥಳ ನಮಗೆ ಗೊತ್ತಾಗುವುದಿಲ್ಲ. ಆದರೆ ಶತ್ರುವನ್ನೂ ವ್ಯಾಧಿಯನ್ನೂ ಬೆಳೆಯಲು ಬಿಟ್ಟರೆ ಪ್ರಾಣಹಾನಿಯೇ ಪರಿಣಾಮವೆಂದು ಹಿರಿಯರು ಹೇಳುತ್ತಾರೆ, ಆದುದರಿಂದ ನಾವು ನೆಮ್ಮದಿಯಾಗಿ ಬದುಕಿರಬೇಕಾದರೆ ಈ ತೀವ್ರ ಸಮಸ್ಯೆಯನ್ನು ಎದುರಿಸಲೇ ಬೇಕು. ಅಪಾಯವನ್ನು ಎದುರಿಸಲಿಕ್ಕೆ ಆರು ಮಾರ್ಗಗಳನ್ನು ಹೇಳುತ್ತಾರೆ; ಶತ್ರುವಿನೊಂದಿಗೆ ರಾಜಿಮಾಡಿಕೊಳ್ಳುವುದು, ಶತ್ರುವಿನೊಂದಿಗೆ ಯುದ್ಧಮಾಡುವುದು, ನಮ್ಮ ವಾಸಸ್ಥಳವನ್ನು ಬದಲಿಸುವುದು. ಇರುವ ವಾಸಸ್ಥಳವನ್ನು ಬಲಪಡಿಸುವುದು, ಬಲವಂತರಾದ ಮಿತ್ರರನ್ನು ಸಂಪಾದಿಸುವುದು, ಯುಕ್ತಿ ಅಥವಾ ವಂಚನೆಗಳಿಂದ ಕಾರ್ಯಸಿದ್ಧಿ ಮಾಡಿಕೊಳ್ಳುವುದು, ಇವೇ ಮುಖ್ಯವಾದ ಆರು ಮಾರ್ಗಗಳು. ನಾವು ಯಾವುದನ್ನು ಅವಲಂಬಿಸಬೇಕೆಂದು ನೀವೆಲ್ಲಾ ಆಲೋಚನೆ ಮಾಡಿ ಹೇಳಬೇಕು."

ಹೀಗೆಂದು ಕಾಗೆರಾಜ ತನ್ನ ಮುಖ್ಯ ಮಂತ್ರಿಗಳಾದ, ಉಜ್ಜೀವಿ, ಸಂಜೀವಿ, ಅನುಜೀವಿ, ಪ್ರಜ್ಜೀವಿ, ಚಿರಂಜೀವಿ ಎಂಬ ಉಪಮಂತ್ರಿಗಳನ್ನೂ, ಸ್ಥಿರಜೀವಿಯೆಂಬ ವೃದ್ಧ ಕಾಗೆಯನ್ನೂ ಬೇರೆಬೇರೆಯಾಗಿ ನೋಡಿತು. ಒಬ್ಬೊಬ್ಬ ಮಂತ್ರಿಯೂ ತನ್ನ ಅಭಿಪ್ರಾಯ ಹೇಳಬೇಕೆಂದು ಹಾಗೆ ನೋಡಿತು.

"ರಾಜಾ, ಶತ್ರು ತುಂಬಾ ಬಲಾಢ್ಯ. ನಮಗೆ ಅವನೊಂದಿಗೆ ಯುದ್ಧ ಮಾಡಲು ಸಾಧ್ಯವಿಲ್ಲ. ನಮಗೆ ಸಾಕಷ್ಟು ಬಲವು ಕೈಗೂಡುವವರೆಗೂ ನಾವು ಶತ್ರುಗಳ ಮುಂದೆ ತಲೆ ಬಾಗಲೇಬೇಕು. ಪ್ರಾಣಾಪಾಯದ ಸ್ಥಿತಿಯಲ್ಲಿ ಬಲಿಷ್ಠರೊಂದಿಗೂ ದುಷ್ಟರೊಂದಿಗೂ ಶಾಂತಿಯನ್ನೇ ನಟಿಸಬೇಕು. ಪ್ರಾಣವಿದ್ದರೇನೇ ಆಶೆಯೂ ಇರುತ್ತೆ. ಯುದ್ಧವು ಜೂಜಿನಂಥಾದ್ದು. ಬೇರೆ ದಾರಿಯಿಲ್ಲದಿದ್ದಾಗಲಷ್ಟೇ ಯುದ್ಧ



ಕ್ಕೆಳಿಯಬೇಕು. ಸಾಧ್ಯವಾದಷ್ಟು ಅನುಕೂಲ ನಿಬಂಧನೆಯೊಂದಿಗೆ ಶಾಂತಿ ಒಪ್ಪಂದ ಮಾಡಿಕೊಳ್ಳುವುದೇ ಒಳ್ಳೆಯದೆಂದು ನನ್ನ ಉದ್ದೇಶ" ಎಂದಿತು ಮಂತ್ರಿ ಉಜ್ಜೀವಿ.

"ನೀತಿಯ ಲಕ್ಷ್ಯವಿಲ್ಲದ ಕ್ರೂರ ಶತ್ರುವಿನೊಂದಿಗೆ ಶಾಂತಿಯ ಪ್ರಶ್ನೆಯೇ ನಿಲ್ಲದು. ಒಪ್ಪಂದಗಳಿಗೆ ಗುಮ್ಮಪಕ್ಷಿಗಳು ಕಟ್ಟುಬೀಳುವಂಥವಲ್ಲ. ನಮ್ಮನ್ನು ನಾಶಮಾಡಲಿಕ್ಕೇ ಅವು ಒಪ್ಪಂದಗಳನ್ನು ಉಪಯೋಗಿಸಿಕೊಳ್ಳುತ್ತವೆ. ಯುದ್ಧವೇ ಒಳ್ಳೆಯದು. ಹಾಗೆ ಮಾಡಿದರೆ ಎರಡರಲ್ಲೊಂದು ತೀರಿಹೋಗುತ್ತದೆ. ಯುದ್ಧವನ್ನು ಮಾಡದೆಹೋದರೆ ನಮ್ಮನ್ನು ನಾವೇ ನಾಶಮಾಡಿಕೊಂಡಂತೆ" ಎಂದಿತು ಸಂಜೀವಿ.

"ಶತ್ರು ಮಹಾಪಾಪಿ, ಬಲಿಷ್ಠ, ದ್ರೋಹಿ. ಆದುದರಿಂದ ನಮಗೆ ಯುದ್ಧವೂ ಬೇಡ, ಶಾಂತಿಯೂ ಬೇಡ. ವಾಸಸ್ಥಳವನ್ನೇ ಬದಲಾಯಿಸಿಬಿಡೋಣ. ಗೂಗೆಗಳಿಗೆ ಸಮೀಪದಲ್ಲಿರುವುದು ಅಪಾಯಕಾರಿ. ನಾವು ಈ ಸ್ಥಳವನ್ನು ಬಿಟ್ಟು ಹೋಗುವುದನ್ನು ಪಲಾಯನವೆಂದು ಭಾವಿಸಬೇಕಾಗಿಲ್ಲ. ಮತ್ತೆ ಒಳ್ಳೆಯ ದಿನಗಳು ಬಂದಾಗ ಇಲ್ಲಿಗೇ ತಿರುಗಿಬರಬಹುದು" ಎಂದಿತು ಅನುಜೀವಿ.

"ಸ್ವಂತ ಸ್ಥಳವನ್ನು ಬಿಟ್ಟು ಹೋಗುವುದು ಒಳ್ಳೆಯದಲ್ಲ. ಅದೇ ನಮಗೊಂದು ಬಲ. ಮೊಸಳೆ ನೀರಲ್ಲಿದ್ದರೆ ಆನೆಯನ್ನೂ ಜಯಿಸುತ್ತದೆ. ಆದರೆ ಅದು ನೆಲಕ್ಕೆ ಬಂದರೆ ನಾಯಿಯನ್ನೂ ಎದುರಿಸಲಾರದು. ನಾವು ಒಮ್ಮೆ ಈ ಸ್ಥಳವನ್ನು ಬಿಟ್ಟು ಹೋದರೆ, ಮತ್ತೆ ಬರಲು ಸಾಧ್ಯವಿಲ್ಲ. ನಮ್ಮೊಳಗೆ ಐಕಮತ್ಯವಿದ್ದರೆ ನಮ್ಮನ್ನು ಜಯಿಸಲು ಯಾರಿಗೂ ಸಾಧ್ಯವಿಲ್ಲ" ಎಂದಿತು ಪ್ರಜ್ಜೀವಿ.

"ನಮಗೆ ಬೇಕಾದುದು ಬಲಿಷ್ಠರ ಸ್ನೇಹ. ಸ್ನೇಹಿತರಿಂದ ಸಹಾಯ ಕೇಳುವುದು ತಪ್ಪೇನಲ್ಲ. ಎಲ್ಲವನ್ನು ನಾಶಮಾಡತಕ್ಕಂತಹ ಬೆಂಕಿ ಕೂಡಾ ಗಾಳಿಯ ಸಹಾಯ ಬೇಡವೆನ್ನದು. ಆದರೆ ನಾವು ನಮ್ಮ ಸ್ಥಾನದಲ್ಲೇ ಗಟ್ಟಿಯಾಗಿ ಅಂಟಿಕೊಂಡಿದ್ದರೇನೇ ಇತರರ ಸಹಾಯ ನಮಗೆ ಲಭಿಸುವುದು. ನಮ್ಮ ಬಲವನ್ನು ನೋಡಿದ ಮೇಲೆಯೇ ಇತರರು ಸಹಾಯಕ್ಕೆ ಬರುತ್ತಾರೆ. ಕಾಡು ಕಿಚ್ಚಿಗೆ ಸಹಾಯ ಪಡುವ ಗಾಳಿ, ಅಲ್ಪವಾದ ಬೆಂಕಿಯನ್ನು ಆರಿಸಿಬಿಡುತ್ತದಷ್ಟೆ ?" ಎಂದಿತು ಚಿರಂಜೀವಿ.

ಹೀಗೆ ಮಂತ್ರಿಗಳು ತಮ್ಮ ತಮ್ಮ ಅಭಿಪ್ರಾಯ ಹೇಳಿದ ಮೇಲೆ, ಕಾಗೆರಾಜ ಮೇಘವರ್ಣ ಸ್ಥಿರಜೀವಿಯೊಂದಿಗೆ, "ಮಹಾಶಯರೆ, ನೀವು ವೃದ್ಧರು, ಪ್ರಾಜ್ಞರು. ಮಂತ್ರಿಗಳು ತಮ್ಮ ಅಭಿಪ್ರಾಯ ಹೇಳಿದರು, ಕೇಳಿದಿರಷ್ಟೆ ? ಈಗ ನಿಮ್ಮ ಅಭಿಪ್ರಾಯವೇನೋ ಹೇಳಬೇಕು" ಎಂದಿತು.



## ೧೮೪. ಕಂಚಿನ ಯುಗದ ಸಸ್ಯದೇವತೆ

ಮಾನವರು ಪಾಶವಿಕ ದಶೆಯಿಂದಲೂ, ಸಂಚಾರ ಜೀವನದಿಂದಲೂ ಸ್ಥಿರನಿವಾಸಗಳಿಗೆ ಮುಟ್ಟಿದ ದಶೆಯಲ್ಲಿ ಸಸ್ಯ ದೇವತೆಗಳನ್ನು ಪೂಜಿಸ ತೊಡಗಿದರು. ಸಿರಿಯಾದಲ್ಲಿ "ರಸ್ ಷಮ್ರಾ"ದ ಬಳಿಯಲ್ಲಿರುವ ರಾಜ ಸಮಾಧಿಗಳಲ್ಲಿ ಸುಂದರವಾದ ಈ ದಂತದ ಬೊಂಬೆ ದೊರಕಿದೆ. ಇದು ನಗಗಳ ಪೆಟ್ಟಿಗೆಯ ಮುಚ್ಚಳದಂತಿದೆ





# ದೇಶಾಟನೆ

ಕಡಲಿನಲೆಯಂತೆ ತನ್ನ ಕಾರ್ಯದಲ್ಲಿ ಸ್ವಲ್ಪವೂ ಬೇಸರಪಡದ ತ್ರಿವಿಕ್ರಮನು, ಮತ್ತೆ ಮರದ ಬಳಿಗೆ ಹಿಂದಿರುಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ಭುಜದ ಮೇಲೆ ಹಾಕಿಕೊಂಡು, ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗೆ ಸೇರಿಕೊಂಡಿದ್ದ ಬೇತಾಳವು ಮಾತಾಡಲು ತೊಡಗಿ "ಎಲೈ ಮಹಾರಾಜನೇ, ನಿನಗೆ ಈ ಶ್ರಮದಿಂದ ಕೂಡಿದ ಕೆಲಸ ಕೊಟ್ಟವನು ನಿನ್ನ ತಂದೆಯಲ್ಲವಷ್ಟೆ? ಏಕೆ ಕೇಳುವೆನೆಂದರೆ, ಕೆಲವು ತಂದೆಯರು ತಮ್ಮ ಮಗಂದಿರನ್ನು ಬಗೆಬಗೆಯ ಕಷ್ಟಗಳಿಗೆ ಗುರಿ ಮಾಡಿದ ಹೊರತು ತೃಪ್ತರಾಗುವುದಿಲ್ಲ. ಅದಕ್ಕೆ ನಿದರ್ಶನವಾಗಿ ನಿನಗೆ ಕಳಿಂಗರಾಜನಾದ ಗುಣಶೇಖರನ ಕಥೆ ಹೇಳುತ್ತೇನೆ. ದಾರಿಯ ಶ್ರಮ ತಿಳಿಯದಂತೆ ಕೇಳುತ್ತಾ ನಡೆ" ಎಂದು ಕಥೆಯನ್ನು ಹೇಳತೊಡಗಿತು:

ಕಳಿಂಗರಾಜ್ಯವನ್ನು ಪಾಲಿಸಿದ ಗುಣಶೇಖರನಿಗೆ ಒಬ್ಬನೇ ಮಗ ರಾಜಶೇಖರ. ರಾಜಕುಮಾರನಿಗೆ ಬೇಕಾದ ಎಲ್ಲಾ ಸುಗುಣಗಳೂ ಅವನಲ್ಲಿದ್ದುವು. ಅವನು ಪ್ರಾಪ್ತವಯಸ್ಸಿಗೆ ಬಂದಾಗ ಆಗತ್ಯವಾದ

ಬೇತಾಳಕಥೆಗಳು...



ಎಲ್ಲಾ ವಿದ್ಯೆಗಳಲ್ಲಿಯೂ ಉತ್ತೀರ್ಣನಾದನು. ಅವನಿಗೆ ವಿದ್ಯೆಗಳನ್ನು ಕಲಿಸಿದ ಗುರುಗಳು ಕೂಡಾ ಅವನಿಗೆ "ಬರಬೇಕಾದ ಜ್ಞಾನವೆಲ್ಲಾ ಪರಿಪೂರ್ಣವಾಗಿದೆ, ಇನ್ನು ಅನುಭವದಿಂದ ಬೆಳಗುತ್ತಾನೆ" ಎಂದರು. ಬೇಗನೇ ಒಳ್ಳೆಯ ಅನುಭವ ಕೂಡಾ ಬರಬೇಕಾದರೆ ದೇಶಾಟನೆಯೇ ಒಳ್ಳೆಯದೆಂದು ಕೊಂಡು ರಾಜನು ತನ್ನ ಮಗನನ್ನು ದೇಶಾಟನೆ ಮಾಡಲು ಕಳುಹಿಸಿಕೊಟ್ಟನು.

ತಂದೆಯ ಮಾತಿನ ಪ್ರಕಾರವೇ ಬಹಳ ಉತ್ಸಾಹದಿಂದ ರಾಜಶೇಖರನು ದೇಶಾಟನೆಗೆ ಹೊರಟನು. ರಾಜನು ಅವನ ಹಿಂದೆ ತನ್ನ ಚಾರರನ್ನು ಕೂಡ್ರ ಕಳುಹಿಸಿದ್ದನು. ಅಗತ್ಯಬಿದ್ದರೆ ಅವರು ರಾಜಶೇಖರನಿಗೆ ಸಹಾಯ ಮಾಡಬೇಕೆಂದು ರಾಜನು ಅವರಿಗೆ ಆಜ್ಞೆ ಮಾಡಿದ್ದನು.

ಆದರೆ ಈ ಸಂಗತಿ ರಾಜಶೇಖರನಿಗೆ ಗೊತ್ತಿರಲಿಲ್ಲ. ಅವನು ಹೊಸ ಹೊಸ ಪ್ರದೇಶಗಳನ್ನೂ, ಹೊಸ ಹೊಸ ಪ್ರಕೃತಿ ದೃಶ್ಯಗಳನ್ನೂ, ಹೊಸ ಹೊಸ ನಾಡು ನಾಡಾವಳಿಗಳನ್ನೂ, ಆಚಾರ ಪದ್ಧತಿಗಳನ್ನೂ ನೋಡುತ್ತ ಪೂರ್ವದಿಕ್ಕಿಗೆ ಪ್ರಯಾಣ ಮಾಡಿದನು. ಒಂದು ದಿನ ರಾತ್ರಿಯಾಗುವಾಗ ಅವನೊಂದು ಅರಣ್ಯಪ್ರಾಂತಕ್ಕೆ ತಲಪಿ ಹಾಗೆಯೇ ಮುಂದೆ ಹೋದನು. ಯಾವುದಾದರೊಂದು ಒಳ್ಳೆಯ ಜಾಗದಲ್ಲಿ ವಿಶ್ರಮಿಸಬೇಕೆಂದು ಆಲೋಚಿಸುತ್ತಿರುವಾಗ, ಏನೋ ಒಂದು ಅಸ್ಪಷ್ಟವಾದ ನರಳಿಕೆಯ ಧ್ವನಿ ಅವನ ಕಿವಿಗೆ ಬಿತ್ತು. ಅವನು ಕುತೂಹಲದಿಂದ ಆ ಧ್ವನಿ ಬರುವ ಕಡೆಗೇ ಹೋಗುತ್ತಿರಲು, ಒಂದು ಕಡೆ ಕೆಳಗಿಳಿಯುವಂತಹ ಎಗುಡುದಿಗುಡಾದ ಮೆಟ್ಟಿಲುಗಳನ್ನು ನೋಡಿ ಅದರ ಮೂಲಕ ಕೆಳಗಿಳಿಯುತ್ತಾ ಭೂಗರ್ಭದಂತಹ ಒಂದು ಸ್ಥಳವನ್ನು ತಲಪಿದನು. ಅಲ್ಲೊಂದು ಪಾತಾಳಭೈರವಿಯ ವಿಗ್ರಹವೂ, ಅದರ ಇದಿರಿನಲ್ಲಿ ಒಂದು ಕಂಬಕ್ಕೆ ಕಟ್ಟಿ ಹಾಕಲ್ಪಟ್ಟ ಸುಂದರ ಯುವತಿಯೂ ಅವನ ಕಣ್ಣಿಗೆ ಬಿದ್ದರು. ವಿಗ್ರಹದ ಮುಂದೆ ಚಿಕ್ಕದೊಂದು ದೀಪವು ಬೆಳಗುತ್ತಿತ್ತು. ಅಳುವ ಶಬ್ದವು ಆ ಸುಂದರಿಯ ಕಂಠದಿಂದಲೇ ಹೊರಡುತ್ತಿತ್ತು.

"ಯಾರು ನೀನು? ನಿನ್ನನ್ನು ಹೀಗೆ ಕಟ್ಟಿದವರು ಯಾರು?" ಎಂದು ರಾಜಶೇಖರನು ಅವಳನ್ನು ನೋಡಿ ಕೇಳಿದನು.

"ನಾನು ಮಾಳವದೇಶದ ರಾಜನ ಮಗಳು. ನನ್ನ ಹೆಸರು ಮಣಿಮಾಲಾ. ನನ್ನನ್ನು ಒಬ್ಬ ಮಾಂತ್ರಿಕನು ಅಪಹರಿಸಿ ತಂದಿದ್ದಾನೆ. ಅವನಿಗೆ ಒಬ್ಬಳು ಮಗಳಿದ್ದಳಂತೆ. ಅವಳು ಸತ್ತುಹೋದಳಂತೆ. ಅವಳ ಜನ್ಮ ನಕ್ಷತ್ರದಲ್ಲೇ ಹುಟ್ಟಿದ ಕನ್ಯೆಯನ್ನು ಈ ಮಹಾಕಾಳಿಗೆ ಬಲಿಕೊಟ್ಟರೆ, ಸತ್ತ ಅವನ ಮಗಳು ಬದುಕುತ್ತಾಳೆಂಬ ನಂಬುಗೆಯಲ್ಲಿ, ಆ ಮಾಂತ್ರಿಕ ಅದೇ ನಕ್ಷತ್ರದಲ್ಲಿ ಹುಟ್ಟಿದ ನನ್ನನ್ನು ತಂದಿದ್ದಾನೆ. ಈ ದಿನ ರಾತ್ರಿ ನನ್ನನ್ನು ಬಲಿ ಕೊಡುತ್ತಾನಂತೆ"

ಎಂದಳು ಅವಳು. ಅವನ ಪೂಜಾ ಕ್ರಮವನ್ನೂ ತಿಳಿಸಿದಳು. "ನೀನೇನೂ ಹೆದರಬೇಡ. ನಾನು ಆ ಮಾಂತ್ರಿಕನನ್ನೇ ಬಲಿಕೊಟ್ಟು ನಿನ್ನನ್ನು ರಕ್ಷಿಸುತ್ತೇನೆ. ಶಾಶ್ವತವಾಗಿ ಅವನ ಭಯ ತೊಲಗಿಸಿಬಿಡುತ್ತೇನೆ," ಎಂದು ಹೇಳಿ ರಾಜಶೇಖರನು ಮತ್ತೊಂದು ಕಂಬದ ಹಿಂದೆ ಅಡಗಿ ನಿಂತನು.

ಸ್ವಲ್ಪಹೊತ್ತಿಗೆ ಮಾಂತ್ರಿಕನು ಬಂದು ದೇವಿಯ ವಿಗ್ರಹದ ಮುಂದೆ ಕುಳಿತುಕೊಂಡು ಮಂತ್ರಗಳನ್ನು ಉಚ್ಚರಿಸಲು ಪ್ರಾರಂಭ ಮಾಡಿದನು. ರಾಜಶೇಖರನು ತನ್ನ ಕತ್ತಿಯನ್ನು ಎತ್ತಿಕೊಂಡು, ಸ್ತಂಭದ ಮರೆಯಿಂದ ಮುಂದೆ ಬಂದನು. ಮಾಂತ್ರಿಕನು ಧಿಗ್ಗನೆದ್ದು ಅವನ ಕತ್ತಿಯ ಕೈಯನ್ನು ಹಿಡಿದಾಗ, ಕತ್ತಿ ಮಾಂತ್ರಿಕನ ತಲೆಯನ್ನು ಕಡಿದುಬಿಟ್ಟಿತ್ತು! ಆಮೇಲೆ ರಾಜಶೇಖರನು ಮಣಿಮಾಲೆಯ ಬಂಧನ ವನ್ನು ಬಿಚ್ಚಿ ತನ್ನ ಕುದುರೆಯ ಮೇಲೆ ಅವಳನ್ನು ಏರಿಸಿಕೊಂಡು ಮಾಳವದೇಶಕ್ಕೆ ಹೋದನು.

ಮಾಳವದ ರಾಜನು ರಾಜಶೇಖರನಿಗೆ ತನ್ನ ಕೃತಜ್ಞತೆ ತಿಳಿಸಿ, ಮಣಿಮಾಲೆಯನ್ನು ಅವನಿಗೆ ಕೊಟ್ಟು ಮದುವೆ ಮಾಡಿದನು. ತರುವಾಯ ರಾಜ ಶೇಖರನು ತನ್ನ ಹೆಂಡತಿಯೊಂದಿಗೆ ಸ್ವದೇಶಕ್ಕೆ ಹಿಂದಿರುಗಿ, ನಡೆದ ಸಂಗತಿಯನ್ನೆಲ್ಲಾ ತಂದೆಗೆ ಹೇಳಿ, ಸಂತೋಷಪಡಿಸಿದನು.

ಆಮೇಲೆ ಒಂದು ತಿಂಗಳ ನಂತರ ತಂದೆ ಗುಣ ಶೇಖರನು ರಾಜಶೇಖರನನ್ನು ಕರೆದು, "ನಿನ್ನ ದೇಶಾಟನೆಯ ಫಲದಿಂದ ನನಗೇನೂ ಸರಿಯಾದ ತೃಪ್ತಿಯಾಗಿಲ್ಲ. ಇನ್ನೊಮ್ಮೆ ಬೇರೆ ದಿಕ್ಕಿಗೆ ದೇಶಾ ಟನೆ ಮಾಡಿ ಬಾ" ಎಂದನು.

ಈಸಾರಿ ರಾಜಶೇಖರನು ಪಶ್ಚಿಮ ದಿಕ್ಕಿಗೆ ಪ್ರಯಾಣ ಮಾಡಿದನು. ರಾಜನು ಅವನಿಗೆ ತಿಳಿಯ ದಂತೆ ಕಳುಹಿಸಿದ ಚಾರರೂ ಅವನ ಹಿಂದೆ ಈ ಸಲವೂ ಇದ್ದರು.



ಈ ಪ್ರಯಾಣದಲ್ಲಿ ರಾಜಶೇಖರನಿಗೆ ಬಂಜರು ಬಿದ್ದು ಒಣಗಿಹೋದ ಹೊಲಗಳೂ, ಎಲುಬಿನ ಗೂಡಿನಂತಹ ಮನುಷ್ಯರೂ, ಗಿಡ್ಡದಪ್ಪದ ಮನು ಷ್ಯರೂ ಕಂಡು ಬಂದರು. ಇದನ್ನೆಲ್ಲ ನೋಡಿ ಅವ ನಿಗೆ ಬಹಳ ಸಂಕಟವೆನಿಸಿತು. ಗುಂಪು ಗುಂಪಾಗಿ ಜನರು ಮತ್ತೆಲ್ಲಿಗೋ ವಲಸೆ ಹೋಗುತ್ತಿದ್ದರು. ಅವರನ್ನು ಮಾತಾಡಿಸಿದಾಗ, ತಮ್ಮ ದೇಶದಲ್ಲಿ ಕ್ಷಾಮವು ತಾಂಡವಿಸುತ್ತದೆಂದೂ, ಅದರ ಮೇಲೆ ಕಾರ್ಕೋಟಕನಂತಹ ರಾಜನು ತಮ್ಮನ್ನು ತೆರಿಗೆ ಗಳಿಂದ ಪೀಡಿಸುತ್ತಾನೆಂದೂ ಹೇಳಿದರು. ರಾಜ ಶೇಖರನು ಮುಂದೆ ನಡೆದು ಒಂದು ಗ್ರಾಮವನ್ನು ಸೇರಿದನು. ಅಲ್ಲಿ ರಾಜಭಟರು ಕಂದಾಯಗಳಿಗಾಗಿ ಪ್ರಜೆಗಳನ್ನು ಹೇಗೆ ಪೀಡಿಸುತ್ತಾರೆಂಬುದನ್ನು ಕಣ್ಣಾರೆ ನೋಡಿದನು.

ರಾಜಶೇಖರನು ಅತ್ಯಂತ ಕೋಪದಿಂದ ಆ ದೇಶದ ರಾಜನ ಬಳಿಗೆ ಹೋಗಿ, ಅತನ ಪರಿಪಾಲನೆ

ಯನ್ನು ತೀವ್ರವಾಗಿ ನಿಂದಿಸಿ ಮಾತಾಡಿದನು. ಮೂರ್ಖನಾದ ಆ ರಾಜನು ರಾಜಶೇಖರನನ್ನು ಬಂಧಿಸಿ ಸೆರೆಯಲ್ಲಿಟ್ಟನು. ಈ ಸಮಾಚಾರ ಚಾರರ ಮುಖಾಂತರವಾಗಿ ಗುಣಶೇಖರನಿಗೆ ತಿಳಿಯಿತು. ಕೂಡಲೇ ಅವನು ದೊಡ್ಡ ಸೈನ್ಯದೊಂದಿಗೆ ಸಾಗಿ ಬಂದು, ಆ ರಾಜನನ್ನು ಸಂಹರಿಸಿ, ರಾಜಶೇಖರ ನನ್ನು ಸೆರೆಯಿಂದ ಬಿಡಿಸಿದನು. ಆ ಮೇಲೆ ಆ ದೇಶ ದಲ್ಲಿ ಒಳ್ಳೆಯ ಪರಿಪಾಲನೆಗೆ ಬೇಕಾದ ಏರ್ಪಾಡು ಗಳನ್ನೂ ಮಾಡಿದನು ಗುಣಶೇಖರ.

ಈ ಬಗೆಯಾಗಿ ಗುಣಶೇಖರನು, ಮಗನು ಮಾಡಿದ ಎರಡನೆಯ ದೇಶಾಟನೆಯಲ್ಲಿ ಸಂತೃಪ್ತಿ ತೋರಿಸಿ, ಅವನಿಗೆ ಅತಿ ವೈಭವದಿಂದ ಯುವರಾಜ ಪಟ್ಟಾಭಿ ಷೇಕವನ್ನೂ ಮಾಡಿದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ನನಗೊಂದು ಸಂದೇಹ. ಗುಣಶೇಖರನು ತನ್ನ ಮಗನು ಮಾಡಿದ ಮೊದಲನೇ ದೇಶಾಟ ನೆಯ ಬಗೆಗೆ ಏಕೆ ತೃಪ್ತನಾಗಲಿಲ್ಲ? ಅದು ಸುಖ ವಾಗಿ ನಡೆದುದು ಮಾತ್ರವಲ್ಲದೆ, ರಾಜಶೇಖರನಿಗೆ ಒಳ್ಳೆಯ ಹೆಂಡತಿಯನ್ನೂ ಕೊಡಿಸಿತ್ತು. ಅದ ಕ್ಕಿಂತಲೂ ಅವನನ್ನು ಕಷ್ಟಗಳಿಗೆ ಗುರಿ ಮಾಡಿದ ಎರಡನೇ ದೇಶಾಟನವು ಹೇಗೆ ರಾಜನಿಗೆ ತೃಪ್ತಿ ಯನ್ನುಂಟು ಮಾಡಿತು? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದು ಕೂಡಾ ಹೇಳದೆ ಹೋದರೆ, ನಿನ್ನ ತಲೆ ಒಡೆದು ಹೋಗುತ್ತದೆ." ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ರಾಜನು ತನ್ನ ಮಗನನ್ನು ದೇಶಾಟನೆಗೆ ಕಳುಹಿಸಿದ್ದು, ಸುಮ್ಮನೆ ಪ್ರಯಾಣ ಮಾಡಿ ಹೆಂಡತಿಯನ್ನು ಸಂಪಾ ದಿಸಿಕೊಂಡು ತರಲಿಕ್ಕಲ್ಲ; ರಾಜನಾಗಲಿರುವವನಿಗೆ ಅಗತ್ಯವಾದ ಅನುಭವಗಳಿಸಿಕೊಳ್ಳಬೇಕೆಂತಲೇ. ರಾಜಶೇಖರನು ಮಾಡಿದ ಮೊದಲನೇ ದೇಶಾಟನ ದಲ್ಲಿ ಅಂತಹುದೇನೂ ನಡೆಯಲಿಲ್ಲ. ಅದರಲ್ಲಿ ಅವ ನಿಗೆ ದೊರೆತ ಅನುಭವಗಳು ಕೇವಲ ವ್ಯಕ್ತಿಪರ ವಾದುದೇ. ಆದರೆ ಎರಡನೇ ಪ್ರಯಾಣದಲ್ಲಿ ದೊರೆತ ಅನುಭವವು ಮಹತ್ವವಾದುದು. ಅವನು ಪ್ರಜೆಗಳ ಕಷ್ಟಗಳನ್ನು ನೋಡಿದ್ದಾನೆ; ಅವುಗಳನ್ನು ಕುರಿತು ಒಳ್ಳೆಯ ಪಾಲಕನಾದವನು ಪ್ರದರ್ಶಿಸು ವಂತಹ ಪ್ರಯತ್ನವನ್ನೇ ಮಾಡಿದ್ದಾನೆ. ಪ್ರಜೆಗಳ ಪಕ್ಷವಾಗಿ ನಾಯಕತ್ವವಹಿಸಿದ್ದಾನೆ. ಈ ಕಾರಣ ಗಳಿಂದಲೇ ಅವನ ತಂದೆಗೆ ಎರಡನೇ ಪ್ರಯಾಣವು ತೃಪ್ತಿಯನ್ನಿತ್ತಿತ್ತು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಮತ್ತೆ ಮರದ ಕೊಂಬೆಯಲ್ಲಿ ನೇತಾಡತೊಡಗಿತು.





# ಭೂದಾನ

ಪುಲಂಪುರವೆಂಬ ಗ್ರಾಮದ ಹೊರ ಭಾಗದಲ್ಲಿ ಪಾಳು ಬಿದ್ದ ಮೈದಾನದಂತಹ ದೊಡ್ಡದೊಂದು ಭೂಪ್ರದೇಶವಿತ್ತು. ಅದಕ್ಕೆ ಯಾವ ಕಾಲದಲ್ಲಿಯೋ ಏನೋ ಕಾರಣದಿಂದ ಶಾಪ ಬಿದ್ದಿದೆಯೆಂದು ಗ್ರಾಮದವರು ಹೇಳುತ್ತಾರೆ. ಅದಕ್ಕಿಂತ ಹಿಂದಿನ ಕಾಲದಲ್ಲಿ ಆ ಪ್ರದೇಶದಲ್ಲಿ ಚಿನ್ನದಂತಹ ಬೆಳೆ ಬರುತ್ತಿತ್ತಂತೆ. ಒಂದು ವರ್ಷ ಏನೋ ಶಾಪದಿಂದ ಆ ಪ್ರದೇಶವು ನೆರೆಯಲ್ಲಿ ಮುಳುಗಿತಂತೆ. ಆಮೇಲೆ ಅದು ವ್ಯವಸಾಯಕ್ಕೆ ಉಪಯೋಗವಿಲ್ಲದೆ ಹೋಯಿತೆಂದೂ, ಬಿತ್ತಿದ ಬೀಜವು ಮೊಳಕೆ ಸಹಾ ಬರುವುದಿಲ್ಲವೆಂದೂ ಹೇಳುವರು. ಬೇಡದ ಪೊದೆಗಳೂ, ಮುಳ್ಳು ಗಿಡಗಳೂ ಅಲ್ಲಲ್ಲಿ ಇದ್ದುವು.

ಆ ಸ್ಥಳದ ಯಜಮಾನನು ರಘುರಾಮನೆಂಬ ಧನಿಕ. ಅವನು ಹೆಸರಿಗೆ ಧನಿಕನೇ ಹೊರತು, ಒಂದು ಕಾಸು ಬಿಚ್ಚಬೇಕಾದರೆ ನೂರು ಸಾರಿ ಆಲೋಚನೆ ಮಾಡುವನು.

ಅದೇ ಗ್ರಾಮದಲ್ಲಿರುವ ರತನ್‌ರಾಮನು ಧನಿಕ ರೈತನೊಬ್ಬನ ಮಗ. ಅವನು ನಗರದಲ್ಲಿ ಕೃಷಿ ಶಾಸ್ತ್ರವನ್ನು ಅಧ್ಯಯನಮಾಡಿ ಉತ್ತೀರ್ಣನಾಗಿ ತನ್ನ ಗ್ರಾಮಕ್ಕೆ ತಿರುಗಿ ಬಂದನು. ಆ ಬಂಜರು ಪ್ರದೇಶವನ್ನು ನೋಡಿದಾಗಳೆಲ್ಲಾ ಅವನ ಜೀವನಕ್ಕೆ ಸಂಕಟವಾಗುತ್ತಿತ್ತು. ಅಷ್ಟು ದೊಡ್ಡ ಖಾಲಿ ಪ್ರದೇಶವು ನಿಷ್ಪ್ರಯೋಜನವಾಗಿರುವುದನ್ನು ನೋಡಿ ಅವನು ಸಹಿಸಲಾರದೆ ಹೋದನು. ಅದನ್ನು ಮನೆ ಕಟ್ಟಲು ಉಪಯೋಗಿಸೋಣವೆಂದರೆ ಆ ಪ್ರಾಂತದ ಸುತ್ತುಮುತ್ತಲೂ ಮನೆಯಿಲ್ಲದವರಾರೂ ಇಲ್ಲ. ರತನ್‌ರಾಮನು ಆ ಭೂಮಿಯ ಸ್ವಲ್ಪ ಮಣ್ಣನ್ನು ತೆಗೆದುಕೊಂಡು ಹೋಗಿ ಪರೀಕ್ಷೆ ಮಾಡಿಸಿದನು. ಅದರಲ್ಲಿ ಒಂದು ಬಗೆಯ ರಸಾಯನವು ಲೋಪಿಸಿರುವುದೆಂದೂ ಅದನ್ನು ಗೊಬ್ಬರದೊಂದಿಗೆ ಬೆರೆಸಿ ಚೆಲ್ಲಿದರೆ ಆ ಭೂಮಿ ಸಾಗುವಳಿಗೆ ಯೋಗ್ಯವಾಗುವುದೆಂದೂ ಗೊತ್ತಾಯಿತು. ಆದುದರಿಂದ ತಾನು ಹೇಗಾದರೂ ಆ ಭೂಮಿಯನ್ನು ರಘುರಾಮನಿಂದ ದಾನವಾಗಿ ಪಡೆದು ಗ್ರಾಮದೊಳಗಿನ ಬಡರೈತರಿಗೆ ಹಂಚಿಕೊಟ್ಟು ಕೃಷಿ ಮಾಡಿಸಬೇಕೆಂದು ರತನ್‌ರಾಮನಿಗೆ ತೋರಿತು.

ಆದರೆ ರಘುರಾಮನು ಯಾರಿಗೂ ಏನನ್ನೂ ದಾನಕೊಡುವ ಮನುಷ್ಯನೇ ಅಲ್ಲ. ಆ ಪ್ರದೇಶವು

ಉಪಯೋಗವಿಲ್ಲದ ಬರಡುಭೂಮಿಯಾದರೂ ಅವ ನೇನೂ ಕೊಡಲಾರ. ಆದರೆ ಅವನಿಗಿರುವ ಮೂಢ ನಂಬುಗೆಗಳನ್ನು ಆಧಾರವಾಗಿ ಹಿಡಿದು ಅವನನ್ನು ವಶಪಡಿಸಿಕೊಳ್ಳಬೇಕು. ಅದಕ್ಕೆ ಸಹಾಯಮಾಡ ಬಹುದಾದ ಮಿತ್ರ ದೇಬಾಶೀಸ್ ಎಂಬವನು ನಗರ ದಲ್ಲಿದ್ದಾನೆ. ಅವನು ಇಂದ್ರಜಾಲ ಮಾಡಲು ಬಲ್ಲವ ನಾದುದರಿಂದ ಅವನು ಎಂಥವರನ್ನಾದರೂ ಮಣಿಸಿ ಬಿಡಬಲ್ಲನು. ರತನ್‌ರಾಮು ನಗರಕ್ಕೆ ಹೋಗಿ ಎಲ್ಲಾ ಸಂಗತಿಯನ್ನೂ ಅವನಿಗೆ ಹೇಳಿದನು. ದೇಬಾಶೀಸ್ ಸ್ವಲ್ಪ ಯೋಚಿಸಿ ರಘುರಾಮುನನ್ನು ದಾರಿಗೆ ತರಲು ಒಂದು ತಂತ್ರವನ್ನು ಹೇಳಿದನು.

ಒಂದು ದಿನ ಬೆಳಿಗ್ಗೆ ರತನ್‌ರಾಮು ರಘುರಾಮುನ ಮನೆಗೆ ಹೋಗಿ ಕ್ಷೇಮಸಮಾಚಾರಗಳನ್ನು ಕುರಿತು ಮಾತು ತೆಗೆದನು. "ಹುಂ. ಎಲ್ಲಾ ಕುಶಲರಾಗಿಯೇ ಇದ್ದೇವಪ್ಪ. ಆದಕ್ಕೇನು ಬಿಡು. ಬೆಳಗ್ಗಿನ ಹೊತ್ತಿನಲ್ಲಿ ಬಂದೆಯಲ್ಲಾ? ಏನಾದರೂ ವಿಶೇಷವಿದೆಯೇ?" ಎಂದು ರಘುರಾಮುನು ಕೇಳಿದ.

"ಒಂದು ವಿಶೇಷ ಹೇಳೋಣವೆಂತಲೇ ಬಂದೆ. ನಿಮ್ಮದೊಂದು ಬರಡುಭೂಮಿ ಇದೆಯಲ್ಲಾ? ಕೇಳಿ, ನನಗೆ ನಿನ್ನೆ ರಾತ್ರಿ ಕನಸಿನಲ್ಲಿ ಧಾನ್ಯಲಕ್ಷ್ಮಿ ಕಾಣಿಸಿ, ನನಗೊಂದು ವರವನ್ನು ಕೊಟ್ಟಳು. ಅವ ಳನ್ನು ಧ್ಯಾನಿಸುತ್ತ ಅವಳ ಹೆಸರನ್ನು ಹತ್ತು ಸಾರಿ ಉಚ್ಚರಿಸಿ ನಾನು ಯಾವ ಹೊಲದ ಮಣ್ಣಿನ ಮೇಲೆ ಊದಿದರೂ ಆ ಹೊಲದಲ್ಲಿ ಚೆನ್ನಾಗಿ ಬೀಜ ಮೊಳೆತು ಬೆಳೆಯುತ್ತದಂತೆ. ಅವಳು ನನ್ನೊಂದಿಗೆ ಹೀಗೆ ಹೇಳಿದಳು. 'ಆ ರಘುರಾಮುನ ಜಾಗ ಖಾಲಿ ಯಾಗಿದೆ. ನೀನು ನನ್ನ ವರದ ಅದ್ಭುತವನ್ನು ಆತನ ಮುಂದೆ ಪ್ರದರ್ಶಿಸಿ, ಆ ನೆಲವನ್ನು ದಾನವಾಗಿ ಪಡೆದುಕೊಂಡು, ಬಡರೈತರಿಗೆ ಹಂಚಿಕೊಡು. ನೀನು ತೋರಿಸಿದ ಅದ್ಭುತವನ್ನು ನೋಡಿ ಸಹಾ ಅವನು ನಿನಗೆ ಆ ಭೂಮಿಯನ್ನು ಕೊಡದೇಹೋದರೆ ನಾನು ಶಾಪ ಕೊಟ್ಟು, ಅವನ ಎಲ್ಲಾ ಹೊಲಗಳೂ ಪಾಳು ಬೀಳುವಂತೆ ಮಾಡುತ್ತೇನೆ. ಅವನ ಹಣವೆಲ್ಲಾ ಬೂದಿಯಾಗಿ ಹೋಗುತ್ತದೆ. ಅವನ ಪಶುಗಳೆಲ್ಲವೂ



ಸತ್ತು ಹೋಗುತ್ತವೆ. ಅವನು ನಾಯಿಗಿಂತ ಹೀನವಾಗಿ ಬದುಕಬೇಕಾದೀತೆಂದು ಹೇಳು.' ಎಂದು ಎಚ್ಚರಿಸಿದ್ದಾಳೆ. ಇನ್ನು ನಿಮ್ಮ ಚಿತ್ತ" ಎಂದ ರತನ್‌ರಾಮ ರಘುರಾಮನೊಂದಿಗೆ.

ರಘುರಾಮ ಎಲ್ಲವನ್ನೂ ಶ್ರದ್ಧೆಯಿಂದ ಕೇಳಿ, "ನೀನು ಹೇಳುವ ಆ ಅದ್ಭುತವೆಂತಹುದು? ಅದನ್ನು ನೋಡಿ ಮತ್ತೆ ಹೇಳುತ್ತೇನೆ" ಎಂದನು.

"ಅದರ ಸಂಗತಿ ನನಗಿನ್ನೂ ಸ್ಪಷ್ಟವಾಗಿ ತಿಳಿಯಲಿಲ್ಲ. ಈ ದಿನ ಸಾಯಂಕಾಲ ಸ್ವಲ್ಪ ಪೂಜೆ ಮುಂತಾದ್ದು ಮಾಡಬೇಕಾಗಿದೆ. ಆಗ ವಿವರಗಳು ತಿಳಿಯುವ ಅವಕಾಶವಿದೆ. ಮೊದಲು ನೀವು ಧಾನ್ಯಲಕ್ಷ್ಮಿ ಹೇಳಿದಂತೆ ಮಾಡುವಿರಾ ಎಂಬುದಕ್ಕೆ ಗಟ್ಟಿ ಉತ್ತರ ಕೊಡಬೇಕು" ಎಂದ ರತನ್‌ರಾಮ.

"ನಿನ್ನ ಅದ್ಭುತದಲ್ಲಿ ನನಗೆ ನಂಬುಗೆ ಹುಟ್ಟಿದರೆ ದೇವಿ ಹೇಳಿದ ಹಾಗೆಯೇ ಮಾಡುತ್ತೇನೆ" ಎಂದ ರಘುರಾಮ. ಅಷ್ಟು ಮಾತು ಪಡೆದು ಅಲ್ಲಿಂದ ಹಿಂದಿರುಗಿದ ರತನ್‌ರಾಮನು, ಅದೇ ದಿನ ಸಾಯಂಕಾಲ ಕೆಲವು ಮಂದಿ ಬಡರೈತರನ್ನು ತನ್ನ ಜತೆಯಲ್ಲಿ ಕರೆದುಕೊಂಡು ರಘುರಾಮನ ಮನೆಗೆ ಬಂದನು. ಅವನು ತನ್ನ ಜೇಬಿನೊಳಗಿನಿಂದ ಗಾಜಿನ ಗ್ಲಾಸನ್ನು ತೆಗೆದು ಕೋಣೆಯ ಮೂಲೆಯಲ್ಲಿದ್ದ ಮೇಜಿಯ ಮೇಲೆ ಇಟ್ಟನು. ತರುವಾಯ ಅವನು "ಯಾರಾದರೂ ಹೋಗಿ ಇವರ ಆ ಬರಡುಭೂಮಿಯಿಂದ ಒಂದು ಮುಷ್ಟಿ ಮಣ್ಣು ತೆಗೆದುಕೊಂಡು ಬನ್ನಿ" ಎಂದನು.

ರಘುರಾಮನ ಮಗನೊಬ್ಬನು ಆ ಸ್ಥಳಕ್ಕೆ ಹೋಗಿ ಒಂದಿಷ್ಟು ಮಣ್ಣು ತೆಗೆದುಕೊಂಡು ಬಂದನು. ರತನ್‌ರಾಮ ಅದನ್ನು ಗ್ಲಾಸಿನೊಳಗೆ ಹಾಕಿ, ಬಾಯಿಯಿಂದ ಮೂರು ಬಾರಿ ಊದಿ, ಗ್ಲಾಸಿನ ಮೇಲೆ ಕರವಸ್ತ್ರವನ್ನು ಮುಚ್ಚಿ, ಆ ಮೇಜಿಯ ಮುಂದೆ ಕುಳಿತು ಕೈಜೋಡಿಸಿ ಕಣ್ಣು ಮುಚ್ಚಿ ಸ್ವಲ್ಪಹೊತ್ತು ಧ್ಯಾನ ಮಾಡಿದನು. ಆಮೇಲೆ ಕಣ್ಣುತೆರೆದು ಎದ್ದು ಗ್ಲಾಸಿನ ಮೇಲೆ ಮುಚ್ಚಿದ್ದ ಕರವಸ್ತ್ರವನ್ನು ತೆಗೆದನು. ಆಗ ಆ



ಗ್ಲಾಸಿನ ತುಂಬಾ ಮಣ್ಣಿಗೆ ಬದಲು ಧಾನ್ಯವಿದ್ದಿತು! ಅಲ್ಲಿದ್ದ ರೈತರೆಲ್ಲರೂ ಎದ್ದು ಬಂದು ಕೈಮುಗಿಯುತ್ತ ಅದನ್ನು ನೋಡಿ, "ಧಾನ್ಯಲಕ್ಷ್ಮಿಗೆ ಜೈ! ಲಕ್ಷ್ಮೀಮಾತೆಗೆ ಜೈ!" ಎಂದು ಕೂಗಿದರು.

ರಘುರಾಮನ ಮುಖದಲ್ಲಿ ಆಶ್ಚರ್ಯದೊಂದಿಗೆ ಭಯವೂ ಮಿಳಿತವಾಯಿತು. ಅವನು ರತನ್‌ರಾಮನನ್ನು ನೋಡಿ, ಆಮೇಲೆ ರೈತರನ್ನೂ ನೋಡಿ, ಗದ್ಗದ ಕಂಠದಿಂದ, "ರೈತಮಿತ್ರರೇ, ಉಪಯೋಗವಿಲ್ಲದ ಆ ಬಂಜರುಭೂಮಿಯನ್ನು ನಿಮಗೇ ಕೊಟ್ಟುಬಿಡುತ್ತೇನೆ. ಕಾಗದ ತೆಗೆದುಕೊಂಡು ಬನ್ನಿ. ದಾನಪತ್ರ ರುಜುಮಾಡಿ ಕೊಡುತ್ತೇನೆ" ಎಂದನು.

ಅಂಗೈಯಷ್ಟು ಸ್ವಂತನೆಲವಿಲ್ಲದ ಆ ಬಡ ಕೂಲಿಯ ರೈತರಿಗೆ, ಈ ವಿಧವಾಗಿ ಭೂವಸತಿಯುಂಟಾಯಿತು. ರತನ್‌ರಾಮನು ಚಂದಾ ವಸೂಲು ಮಾಡಿ ಸಾಮೂಹಿಕ ವ್ಯವಸಾಯಕ್ಕೆ ಬೇಕಾದ ಎಲ್ಲಾ ಸಲಿಗೆಗಳೂ ಸಿಗುವಂತೆ ಮಾಡಿದನು. ರಾಸಾಯನಿಕ ಗೊಬ್ಬರದಿಂದ ನೆಲವೂ ಫಲಿಸುವಂತಾಯಿತು. ರೈತರೆಲ್ಲ ಉತ್ಸಾಹದಿಂದ, ಒಗ್ಗಟ್ಟಾಗಿ ಕೆಲಸ ಮಾಡಿದುದರಿಂದ ಬಂಜರುನೆಲವು ಉತ್ತಮವಾದ ಪೈರಿನ ನೆಲವಾಯಿತು. ಇದನ್ನೆಲ್ಲ ನೋಡಿ ರಘುರಾಮನೊಬ್ಬನೇ ಏನೋ ಸ್ವಲ್ಪ ಮುಖಬಾಡಿಸಿಕೊಂಡಿದ್ದ.

ಇದಿಷ್ಟಕ್ಕೂ ಮೂಲವಾದ ರತನ್‌ರಾಮನು ಮಾಡಿದ ಇಂದ್ರಜಾಲವೇನೆಂದರೆ, ಅವನು ಉಪಯೋಗಿಸಿದ ಗ್ಲಾಸು ಸಾಧಾರಣ ಗ್ಲಾಸಲ್ಲ. ಪಕಳೆಗಳಿರುವ ಗ್ಲಾಸು. ಅದರ ಮಧ್ಯಭಾಗದಲ್ಲಿ ಕನ್ನಡಿ ತುಂಡುಗಳನ್ನು ಅಳವಡಿಸಲಾಗಿತ್ತು. ಆದರಿಂದ ಗ್ಲಾಸಿನ ಒಳಭಾಗವು ಎರಡು ವಿಭಾಗಗಳಾಗಿದ್ದಿತು. ಕನ್ನಡಿತುಂಡುಗಳಿಂದ ಪ್ರತಿಬಿಂಬಿಸುವ ಭಾಗವು ಹೊರಬದಿಗೂ ಕೆಂಪಗಿನ ಮದ್ದಿರುವ ಭಾಗವು ಒಂದಕ್ಕೊಂದು ಅಂಟಿಸಿದಂತೆಯೂ ಇದ್ದುವು. ಈ ಕನ್ನಡಿ ತುಂಡುಗಳ ಮೂಲಕವಾಗಿ ಖಾಲೀಗ್ಲಾಸಿನ ಎರಡು ಅರ್ಧಭಾಗಗಳೂ ಪೂರ್ತಿ ಒಂದು ಗ್ಲಾಸಿನಂತೆಯೇ ಕಾಣುತ್ತವೆ. ರತನ್‌ರಾಮನು ಆ ಗ್ಲಾಸಿನ ಒಂದು ಅರ್ಧಭಾಗದಲ್ಲಿ ಮೊದಲೇ ಧಾನ್ಯವನ್ನು ತುಂಬಿಸಿ ಅದು ಗೋಡೆಯ ಕಡೆಗಿರುವಂತೆ ಇಟ್ಟು, ಎಲ್ಲರಿಗೂ ಕಾಣುವ ಇನ್ನೊಂದು ಅರ್ಧದಲ್ಲಿ ಮಣ್ಣು ತುಂಬಿಸಿದನು. ಆಮೇಲೆ ಕರವಸ್ತ್ರವನ್ನು ಎತ್ತುವಾಗ ಮಣ್ಣಿರುವ ಭಾಗವನ್ನು ಗೋಡೆಯ ಬದಿಗೆ ತಿರುಗಿಸಿದನು. ಆಗ ನೋಡುವವರಿಗೆ ಧಾನ್ಯವಿರುವ ಭಾಗ ಮಾತ್ರವೇ ಕಂಡು ಬಂದು ಅದ್ಭುತವೆನಿಸಿತು. ಕನ್ನಡಿಯ ಮೂಲಕವಾಗಿ ಮಣ್ಣೂ ಧಾನ್ಯವೂ ಕೂಡಾ ಗ್ಲಾಸು ತುಂಬಾ ಇರುವಂತೆ ನೋಡುವವರಿಗೆ ಭ್ರಮೆಯುಂಟಾಗುತ್ತದೆ. ಪಕಳೆಗೆರೆಗಳಿರುವ ಗ್ಲಾಸಾದುದರಿಂದ ಭ್ರಮೆ ಇನ್ನಷ್ಟು ಹೆಚ್ಚುತ್ತದೆ.



# ಸರಿಯಾದ ಪದ್ಧತಿ

ವಜ್ರಗಿರಿ ರಾಜನಾದ ವಜ್ರಪಾಲನು ತನ್ನ ರಾಜ್ಯದಲ್ಲಿ ಎಂತಹ ದುಷ್ಟರಿಗೂ, ನೀತಿಮಾರ್ಗ ತಪ್ಪಿದವರಿಗೂ ಸ್ಥಳವಿರಬಾರದೆಂದು ನಿರ್ಣಯಿಸಿದನು. ಆದರಂತೆ ಅಂಥವರನ್ನೆಲ್ಲ ಹುಡುಕಿ ಓಡಿಸಿ ದೇಶದಿಂದ ಹೊರಗೆ ಹಾಕಿದನು. ಹೀಗೆ ಒಂದು ವರ್ಷಕಾಲ ಸಾಗಿತು.

ಆಗ ಪ್ರತಿ ಕುಟುಂಬದಿಂದಲೂ ಒಬ್ಬನೋ, ಐದಾರು ಮಂದಿಯೋ ದೇಶಬಹಿಷ್ಕಾರಣೆಗೆ ಗುರಿಯಾಗಿ ಪ್ರಜೆಗಳಲ್ಲಿ ಆಂದೋಲನೆಯುಂಟಾಯಿತು.

ಆಗ ಕೆಲವು ಬುದ್ಧಿವಂತರು ರಹಸ್ಯವಾಗಿ ಸಮಾವೇಶಗೊಂಡು ರಾಜನ ಬುದ್ಧಿಯನ್ನು ಬದಲಾಯಿಸಲು ಒಂದು ಯೋಜನೆ ಮಾಡಿದರು.

ಆ ಪಥಕದಂತೆ ಸುತ್ತುಮುತ್ತಣ ಗ್ರಾಮಗಳಿಂದ ದಿನಾ ರಾಜನಿಗೆ ಫಿರ್ಯಾದುಗಳು ಬರತೊಡಗಿದುವು. ಸಮೀಪದ ಕಾಡುಗಳಿಂದ ಹುಲಿ ಚಿರತೆ ಮೊದಲಾದ ಕ್ರೂರ ಪ್ರಾಣಿಗಳು ಹಳ್ಳಿಗಳ ಮೇಲೆ ಬಿದ್ದು ಪ್ರಜೆಗಳನ್ನು ಕೊಲ್ಲುತ್ತವಂತೆ. ಎಲ್ಲರೂ ಭಯಪಟ್ಟಿದ್ದಾರಂತೆ.

ಎಂದೂ ಇಲ್ಲದೆ ಈಗೇಕೆ ಹೀಗಾಗುತ್ತದೆಂದು ರಾಜನು ಕೇಳಿದುದಕ್ಕೆ ಮಂತ್ರಿ, "ಮಹಾರಾಜರೇ, ಅರಣ್ಯಗಳಲ್ಲಿರುವ ಆಟವಿಕ ನಾಯಕರು ತಮ್ಮ ಸುತ್ತುಮುತ್ತಲಿನ ದುಷ್ಟ ಮೃಗಗಳನ್ನು ಓಡಿಸುತ್ತಿದ್ದಾರೆ. ಅವುಗಳೇ ಇತ್ತ ಬರುತ್ತವೆ." ಎಂದನು.

"ಅಂಥ ಮೃಗಗಳನ್ನು ಶಿಕ್ಷಿಸಬೇಕು. ಅಥವಾ ಅಂಕೆಯಲ್ಲಿಟ್ಟುಕೊಳ್ಳಬೇಕೇ ಹೊರತು ಹೀಗೆ ಓಡಿಸುವುದೆಂದರೇನು ?" ಎಂದ ರಾಜ.

"ಮತ್ತೆ ನಮ್ಮ ರಾಜ್ಯದಲ್ಲಿ ನಾವು ದುಷ್ಟರನ್ನು ಹಾಗೆಯೇ ಮಾಡಿದ್ದೇವಷ್ಟೇ ? ನಾವು ಆಟವಿಕರನ್ನು ಖಂಡಿಸುವುದು ಹೇಗೆ ?" ಎಂದ ಮಂತ್ರಿ.

ಕೂಡಲೇ ರಾಜನಿಗೆ ಜ್ಞಾನ ಬಂದು, ತನ್ನ ಆ ಪದ್ಧತಿಯನ್ನು ಬದಲಾಯಿಸಿದನು.



ಸರಿಯಾದ ಪದ್ಧತಿ



# ಪ್ರಾಪ್ತಿ

ಒಂದು ಊರಿನಲ್ಲಿ ಬಾಲರಾಜನೆಂಬವನು ಶೆಟ್ಟರ ಅಂಗಡಿಯಲ್ಲಿ ಗುಮಾಸ್ತನಾಗಿದ್ದ. ಯಾರ ಹಂಗೂ ಇಲ್ಲದೆ ಸ್ವತಂತ್ರನಾಗಿದ್ದ ಅವನಿಗೆ ಇತ್ತೀಚೆಗೆ ಮದುವೆ ಯಾಗಿತ್ತು. ಒಂದುದಿನ ಬೆಳಿಗ್ಗೆ ಅವನು ನಿದ್ರೆ ಯಿಂದೆದ್ದ ಕೂಡಲೇ, ಮನೆಹಿಂದಿನ ಕೈ ತೋಟದಿಂದ ಹೂಗಳನ್ನು ಕೊಯ್ದುಕೊಂಡು ಒಳಗೆ ಬರುತ್ತಿರುವ ತನ್ನ ಹೆಂಡತಿ ಕಣ್ಣಿಗೆ ಬಿದ್ದಳು.

"ಇವತ್ತು ನಿದ್ದೆಯಿಂದೆದ್ದಕೂಡಲೇ ನಿನ್ನ ಮುಖ ನೋಡಿದೆ. ಈದಿನ ಹೇಗಿರುವುದೋ ನೋಡಬೇಕು" ಎಂದ ಬಾಲರಾಜ.

ಅವಳು ನಗುತ್ತ, "ನನ್ನ ಮುಖ ಬೆಳಿಗ್ಗೆ ಎದ್ದ ಕೂಡಲೇ ನೋಡಿದರೆ ಒಳ್ಳೇದೇ ಆಗುತ್ತಂತೆ. ಅದಕ್ಕೇ ನನ್ನ ಅಪ್ಪ ನಿದ್ದೆಯಿಂದ ಎದ್ದಕೂಡಲೇ ನನ್ನನ್ನು ತನ್ನ ಎದುರಿಗೆ ಕರೆದು ಆಮೇಲೆ ಕಣ್ಣು ಬಿಡುತ್ತಾರೆ" ಎಂದಳು.

ತನ್ನ ಹೆಂಡತಿ ಹೇಳಿದ ಮಾತು ಎಷ್ಟರಮಟ್ಟಿಗೆ ನಿಜವಾಗುವುದೋ ಪರೀಕ್ಷಿಸಿ ನೋಡಬೇಕೆಂದು ಬಾಲ ರಾಜನಿಗೆ ತೋರಿತು. ಅದೇ ನಿರ್ಧಾರದಿಂದ ಎದ್ದ. ಅವನು ಎಂದಿನಂತೆ ಊಟಗೀಟ ಮುಗಿಸಿ ಕೆಲಸಕ್ಕೆ ಹೊರಟ ಮೇಲೆ, ನಿಧಾನವಾಗಿ ನೆಲವನ್ನು ನೋಡುತ್ತಾ ನಡೆದುಕೊಂಡು ಅಂಗಡಿಗೆಹೋದ. ದಾರಿಯಲ್ಲಿ ಬೆಲೆಬಾಳುವ ವಸ್ತು ಒಡವೆಗಳು ಯಾವು ದೊಂದೂ ಅವನಿಗೆ ಸಿಗಲಿಲ್ಲ.

ಆದಿನ ದೊಡ್ಡ ವ್ಯಾಪಾರವೇನಾದರೂ ತಗಲಿ, ಆ ಸಂತೋಷದಲ್ಲಿ ಯಜಮಾನ ಶೆಟ್ಟರು ತನಗೆ ಒಳ್ಳೆಯ ಬಹುಮಾನವೇನಾದರೂ ಕೊಡಬಹುದೆಂದು ಬಾಲರಾಜನಿಗೆ ಆಶೆಯಾಯಿತು. ಆದರೆ ಮೊದಲು ಸಿಕ್ಕಿದ್ದು ತಡವಾಗಿ ಬಂದುದಕ್ಕೆ ತುಸುಬಯ್ಗುಳು. ಆದಿನ ವ್ಯಾಪಾರವು ಎಂದಿಗಿಂತಲೂ ಮಂದವಾಗಿಯೇ ಸಾಗಿತು. ಅಲ್ಲದೆ ಯಜಮಾನರು ತಮ್ಮ ಹೆಂಡತಿ ಯೊಂದಿಗೆ ಏನೋ ಜಗಳವಾಡಿ, ದಿನವಿಡೀ ಸಿಡುಕು ಮುಖದಲ್ಲೇ ಇದ್ದರು.

ಬಾಲರಾಜನಿಗೆ ಮತ್ತೊಂದು ಆಶೆ ಎದ್ದಿತು. ಯುಗಾದಿ ಹಬ್ಬ ಸಮೀಪಿಸುತ್ತಿದೆ. ಕಳೆದಸಾರಿಯ ಹಬ್ಬಕ್ಕೆ ಬಾಲರಾಜ ಮಾವಯ್ಯನ ಮನೆಗೆ ಹೋಗಿದ್ದ. ಈಸಾರಿ ಮಾವಯ್ಯ ಕರೆಯದಿದ್ದರೂ ಯಾವನಾದರೂ ಆಳಿನ ಮೂಲಕ ತನಗೇನಾದರೂ ಬೆಲೆಬಾಳುವ ಕಾಣಿಕೆ ಕಳುಹಿಸಬಹುದೆಂದು ತೋರಿತು.

ಎಂ. ಕೆ. ಈಶ್ವರರಾವ್

ಸಾಯಂಕಾಲದ ಹೊತ್ತಿಗೆ ಮಾವಯ್ಯನ ಮನೇ ಕಡೆಯ ಬಂಧುವೊಬ್ಬ ಅಂಗಡಿಗೆ ಬಂದೇ ಬಂದ. ಆದರೆ ಕಾಣಿಕೆಗಳೇನಾದರೂ ತರುವುದಿರಲಿ, "ನಿಮ್ಮ ಅತ್ತೆಮಾವಂದಿರು ತೀರ್ಥಯಾತ್ರೆಗೆ ಹೋಗುತ್ತಾರಂತೆ. ನಿಮ್ಮ ಹತ್ತಿರ ಒಂದು ನೂರು ರೂಪಾಯಿ ಕೈಗಡವಾಗಿ ಕೇಳಿದರು." ಎಂದ.

"ನನ್ನ ಹತ್ತಿರ ಏನಿದೆ ಬೂದಿ!" ಎಂದು ಬಾಲರಾಜ ಕೋಪದಿಂದ ಹೇಳಿ ಆ ಮನುಷ್ಯನನ್ನು ಕಳುಹಿಸಿಬಿಟ್ಟ.

ಕತ್ತಲಾಗಿಹೋಯಿತು. ಆದಿನ ಯಾವ ಒಳಿತೂ ಆಗಲಿಲ್ಲ. ಆಶೆಗಳೆಲ್ಲ ನಿರಾಶೆಯೇ. ಬಾಲರಾಜ ಉಸ್ಸೆನ್ನುತ್ತ ಮನೆಯಕಡೆಗೆ ಹೊರಟನು.

ದಾರಿಯಲ್ಲಿ ಮುದುಕಿಯೊಬ್ಬಳು ಅವನಿಗೆ ಎದುರು ಬಂದು ಗಕ್ಕನೆ ನಿಂತು, "ಯಾರೂ, ನಮ್ಮ ಬಾಲರಾಜನಲ್ಲವೇನೋ?" ಎನ್ನುತ್ತ ಅವನ ಕೈಹಿಡಿದು, ಬೀದಿ ದೀಪದ ಬೆಳಕಿನಲ್ಲಿ ದಿಟ್ಟಿಸಿ ನೋಡಿದಳು.

ಅವಳನ್ನು ನೋಡಿದಕೂಡಲೇ ಬಾಲರಾಜನ ಪ್ರಾಣವೇ ಹೋದಂತಾಯಿತು. ಕಾರಣವೇನೆಂದರೆ, ಆ ಮುದುಕಿ ಬಾಲರಾಜನಿಗೆ ಒಂದು ಕಾಲದಲ್ಲಿ ತುಂಬಾ ಸನ್ನಿಹಿತಳಾಗಿದ್ದಳು. ಬಾಲರಾಜನ ತಂದೆ ತಾಯಂದಿರು ಅವನ ಚಿಕ್ಕತನದಲ್ಲೇ ಸತ್ತು ಹೋಗಿರಲು, ಅವನು ಊರೂರು ಅಲೆಯ ಬೇಕಾಯಿತು. ಆಗ ಊರಲ್ಲಿದ್ದ ಈ ಮುದುಕಿ ಅವನಿಗೆ ಆಶ್ರಯವಿತ್ತಳು. ಅದಕ್ಕೆ ಮೊದಲೇ ಸತ್ತಿದ್ದ ಅವಳ ಮಗ ಬಾಲರಾಜನಂತೆಯೇ ಇದ್ದನಂತೆ. ಅಂತೆಯೇ ಮುದುಕಿ "ನಿನ್ನ ನೋಡಿದರೆ ನನ್ನ ಮಗನನ್ನು ನೋಡಿದ ಹಾಗೇ ಆಗುತ್ತದಪ್ಪ. ನನ್ನೊಂದಿಗೇ ಇರಪ್ಪ" ಎಂದು ಆದರಿಸಿದ್ದಳು.

ಮುದುಕಿ ಹಾಲು ಮಾರಿ, ಬೆರಣಿತಟ್ಟಿ, ಬಂದ ಹಣದಿಂದ ಒಂದಿಷ್ಟು ಬೇಯಿಸಿ ಪ್ರೀತಿಯಿಂದ ಬಾಲ



ರಾಜನಿಗೆ ಬಡಿಸುತ್ತಿದ್ದಳು. ಹಾಗೆ ಆ ಮುದುಕಿಯ ಹತ್ತಿರ ಅವನು ಎರಡುವರ್ಷ ನಿಶ್ಚಿಂತನಾಗಿದ್ದ. ಆದರೆ ಬರುಬರುತ್ತ ಮುದುಕಿಗೆ ಶಕ್ತಿ ಉಡುಗಿ, ಹಾಲು ಕರೆಯುವುದೂ, ಬೆರಣಿ ತಟ್ಟುವುದೂ ಅವಳ ಶಕ್ತಿಗೆ ಮೀರಿದ ಕೆಲಸಗಳಾದುವು. ಇವನನ್ನೂ ಅಂಥ ಕೆಲಸಕ್ಕೆ ಹಚ್ಚುತ್ತಿದ್ದಳು.

"ನನ್ನ ಕಡೆಗಾಲಕ್ಕೆ ಸರಿಯಾಗಿ ದೇವರೇ ನಿನ್ನನ್ನು ಕಳುಹಿಸಿದರಪ್ಪಾ. ನಾನು ಹಾಸಿಗೆ ಹಿಡಿದರೆ ನೀನೇ ನನಗೆ ದಿಕ್ಕು" ಎಂದು ಹೇಳಿದ್ದಳು ಮುದುಕಿ ಬಾಲರಾಜನೊಂದಿಗೆ.

ಆ ಮಾತು ಕೇಳಿ ಬಾಲರಾಜನಿಗೆ ನಡುಕ ಹುಟ್ಟಿತು. ಯಾರಿಗೆ ಬೇಕು ಮ[illegible]ಕಿಯ ಪೀಡೆ! ತನ್ನ ಬದುಕಿಗೆ ಇದೆಲ್ಲಿ ಗಂಟು [illegible] ಒಂದು ದಿನ [illegible] ತ್ರಿ[illegible] ಯ[illegible]ಲ ಕೆಲವು ತಿಂಗಳು ಕಳೆಯುತ್ತಿರಲು

ಅವನಿಗ [illegible]ಪತಿ
ಹೆಸರು ಶೂರವರ್ಮ,

ಸುಂಧರ"

ಸಂಪಾದಿಸಿ ಒಂದು ನೆಲೆಗೆ ಬಂದಿದ್ದ. ಹೀಗೆ ಅವನು ಮುದುಕಿಯನ್ನು ಬಿಟ್ಟರೂ, ಅವಳು ಅವನನ್ನು ಬಿಡದೆ ಮತ್ತೊಂದು ವರ್ಷದೊಳಗೇ ಬಂದು ಕೈ ಹಿಡಿದಳಲ್ಲಾ! ಇನ್ನು ಅವಳು ತನ್ನ ಮನೆಯಲ್ಲೇ ಬಿದ್ದಿರುತ್ತೇನೆಂದರೆ ಏನು ಗತಿ!

"ಏನೋ ಬಾಲರಾಜೂ! ಹಾಗೆ ನೋಡ್ತಿಯಲ್ಲಾ? ನನ್ನ ಗುರುತು ಹತ್ತಲಿಲ್ಲವೇನೋ? ನಿನ್ನನ್ನು ಸಾಕಿದ ಅಮ್ಮ ನಾನು ಕಣೋ! ಹೇಳದೆ ಕೇಳದೆ ನನ್ನ ಬಿಟ್ಟು ಓಡಿದೆಯಲ್ಲಾ! ಎಷ್ಟು ಗೋಳಾಡಿದೆ ಗೊತ್ತಾ? ನಿನ್ನನ್ನೇ ಹುಡುಕಿಕೊಂಡು ಊರೂರು ತಿರುಗುತ್ತಿದ್ದೇನೆ. ನನ್ನ ಅದೃಷ್ಟದಿಂದ ಈದಿನ ಸಿಕ್ಕಿದಿ. ಇನ್ನು ಈ ಘಟ ಹೆಚ್ಚು ಕಾಲ ಬದುಕುದಪ್ಪಾ!" ಎಂದಳು ಮುದುಕಿ ಕಣ್ಣೀರಿನೊಂದಿಗೆ ಗದ್ಗದವಾಗಿ.

ಬಾಲರಾಜ ಅವಳಿಂದ ತನ್ನ ಕೈಯನ್ನು ಬಿಡಿಸಿಕೊಳ್ಳುತ್ತ, "ಪ್ರಾಯಹೋಗಿ ಕಣ್ಣು ಪೂರಾ ಕುರುಡಾಗಿರಬೇಕು ನಿನಗೆ! ಬುದ್ಧಿ ಕೂಡಾ ಕೆಟ್ಟಿದೆ ಅಂತ ಕಾಣುತ್ತೆ. ನನ್ನ ಹೆಸರು ಬಾಲರಾಜನೂ ಅಲ್ಲ, ಕಾಲರಾಜನೂ ಅಲ್ಲ. ನಾನು ನಿನ್ನನ್ನು ಎಂದಿಗೂ ನೋಡಿದ್ದೂ ಇಲ್ಲ." ಎಂದು ಹೇಳಿ ಮುದುಕಿಯನ್ನು ದಾಟಿ ಬೇಗಬೇಗನೆ ನಡೆದುಬಿಟ್ಟ ದೊಡ್ಡ ಗಂಡದಿಂದ ಪಾರಾದಂತೆ. ಮನೆಗೆ ಬಂದ ಕೂಡಲೇ ಅವನು ಹೆಂಡತಿಯನ್ನು ಕರೆದು, "ನಿನ್ನ ಮುಖ ನೋಡಿದ್ದಕ್ಕೆ ಯಾವ ಒಳ್ಳೆಯದೂ ಇಲ್ಲ; ಬದಲಿಗೆ ಗುಡ್ಡವೇ ಮೇಲೆ ಬೀಳುವ ಹಾಗೆ ಯಾವಾಗಲೋ ನನ್ನನ್ನು ನೋಡಿದ ಮುದುಕಿಯೊಂದು ನನ್ನ ಬೆನ್ನು ಬಿದ್ದು, ನನ್ನ ಒಟ್ಟಿಗೇ ಸಾಯುವವರೆಗೆ ಇರಲಿಕ್ಕೆ ಪ್ರಯತ್ನ ಮಾಡಿತು. ಅದನ್ನು ತಪ್ಪಿಸಿಕೊಂಡು ಬರುವಾಗ ಇಷ್ಟು ಹೊತ್ತಾಯಿತು! ಅಬ್ಬಬ್ಬ!" ಎಂದು ಹೇಳಿದ ಬಲುಬೇಸರದಿಂದ.

"ಚೆನ್ನಾಗಿದೆ ನೀವು ನನ್ನ ಮೇಲೆ ತಪ್ಪು ಹಾಕೋದು! ಪ್ರಾಪ್ತಿ ಇಲ್ಲದಿದ್ದರೆ ಬಾಯಿಯ ಹತ್ತಿರ ಬಂದದ್ದು ಕೂಡಾ ಬಿದ್ದು ಮಣ್ಣು ಪಾಲಾಗುವುದುಂಟು. ಯಾರಿಗೆ ಗೊತ್ತು ಆ ಮುದುಕಿಯ ಕಡೆಯಾಸೆ ಎಂಥದೋ? ಅವಳ ಹತ್ತಿರ ಏನಿದೆಯೋ?" ಎಂದಳು ಬಾಲರಾಜನ ಹೆಂಡತಿ.

ಅವಳ ಮಾತು ಅಕ್ಷರಶಃ ನಿಜವಾಗಿತ್ತು. ಆ ಮುದುಕಿಗೆ ಅವಳ ಗುಡಿಸಲಿನ ಬದಿಯಲ್ಲಿ ಒಂದು ನಿಧಿ ದೊರಕಿತ್ತು. ಬಾಲರಾಜನ ಮೇಲಿನ ಪ್ರೇಮದಿಂದ ಅದನ್ನು ಅವನಿಗೆ ಕೊಡಬೇಕೆಂತಲೇ ಅವಳು ಅವನನ್ನು ಊರೂರು ಹುಡುಕುತ್ತಿದ್ದಳು. ಅದು ಪ್ರಾಪ್ತಿಯಿಲ್ಲದ್ದರಿಂದಲೇ ಬಾಲರಾಜನು ಕಷ್ಟಪಟ್ಟು ಅವಳಿಂದ ತಪ್ಪಿಸಿಕೊಂಡಿದ್ದ. ಈ ಸಂಗತಿ ಮುಂದೆ ಒಂದು ದಿನ ಅವನಿಗೆ ಗೊತ್ತಾಗುವಾಗ ಕೈಮೀರಿತ್ತು.



ನಿಜ...ಗುವುದೋ ಪ...
ರಾಜನಿಗೆ ತೋರಿತು. ... ನಿರ್ಧಾ...
ಅವನು ಎಂದಿನಂತೆ ಊಟಗೀಟ ಮುಗಿಸಿ ಕೆಲ...

ಎಂ. ಕೆ. ಈ...



# "ಮಾಲೀಸ್ ಮಾಡು"

ಅನೇಕ ವರ್ಷಗಳ ಹಿಂದೆ ಪ್ರಚಂಡವೆಂಬುದೊಂದು ದೇಶವಿತ್ತು. ಅದನ್ನು ಪ್ರಭಂಜನ ಮಹಾರಾಜನು ಆಳುತ್ತಿದ್ದನು. ಒಂದು ಸಾರಿ ಹಠಾತ್ತಾಗಿ ಸೇನಾಧಿಪತಿ ಸತ್ತನು. ಇನ್ನು ಆ ಪದವಿಗೆ ಹೊಸಬನೊಬ್ಬನನ್ನು ನಿಯಮಿಸಬೇಕಾಗಿತ್ತು. ಆದಕ್ಕೆ ಯೋಗ್ಯರಾದವರು ನಾಲ್ಕುಮಂದಿ ಇದ್ದರು. ಅವರಲ್ಲಿ ಒಬ್ಬನನ್ನು ಹೇಗೆ ಆರಿಸಬೇಕೆಂದು ರಾಜನಿಗೆ ತಿಳಿಯಲಿಲ್ಲ.

ಮಹಾರಾಜನಿಗೊಬ್ಬ ಖಾಸಾ ಕ್ಷೌರಿಕನಿದ್ದ. ಅವನು ದಿನಾ ಬೆಳಿಗ್ಗೆ ಬಂದು, ರಾಜನಿಗೆ ಕ್ಷೌರಮಾಡಿ ಶರೀರಕ್ಕೆ ಎಣ್ಣೆ ಹಚ್ಚಿ ತಿಕ್ಕಿ ಮರ್ದನ ಮಾಡಿ, ಸ್ನಾನ ಮಾಡಿಸುತ್ತಿದ್ದನು. ಅವನೊಂದಿಗೆ ರಾಜನು ತನಗೆ ಬಂದ ಸಮಸ್ಯೆಗಳನ್ನು ಕುರಿತು ಹೇಳುತ್ತಿದ್ದನು.

"ಈಗ ತನಗೆ ಬಂದಿರುವ ಸೇನಾಧಿಪತಿಯನ್ನು ಆರಿಸುವ ಸಮಸ್ಯೆಯನ್ನು ರಾಜನು ಅವನೊಂದಿಗೆ ಹೇಳಿದನು. ಅದನ್ನೆಲ್ಲ ಕೇಳಿ ಕ್ಷೌರಿಕನು, ಸ್ವಾಮಿ, ಸೇನಾಧಿಪತಿಗೆ ಬರೇ ಶಕ್ತಿ ಇದ್ದರೆ ಸಾಲದು. ರಾಜಭಕ್ತಿ ಕೂಡಾ ಇರಬೇಕು." ಎಂದನು.

"ಅದನ್ನು ತಿಳಿದುಕೊಳ್ಳುವ ಮಾರ್ಗವೇನು ?" ಎಂದು ರಾಜನು ಪ್ರಶ್ನಿಸಲು, ಕ್ಷೌರಿಕನು ಅದಕ್ಕೆ ಸರಿಯಾದ ಉಪಾಯವನ್ನು ರಾಜನ ಕಿವಿಯಲ್ಲಿ ಉಸಿರಿದ. ಆಮೇಲೆ ರಾಜನು ಸೈನ್ಯಾಧಿಪತಿಯ ಪ... ಸೇರಿದ ನಾಲ್ಕು ಮಂದಿಗಳನ್ನೂ ತನ್ನ ಬ... ಯಿಸಿ, ಅವರನ್ನು ಕುರಿತು, "ನಿಮಗೆ ಒಂದು ... ಇಡುವ ಉದ್ದೇಶದಿಂದ ನಿಮ್ಮನ್ನು ಬರಲಿಕ್ಕೆ ಹೇ... ಆದರೆ ನನಗೆ ಎಣ್ಣೆ ಹಚ್ಚಿ ಮರ್ದನಮಾಡಿ ಅಭ್ಯಂಜನ ಮಾಡಿಸುವ ಕ್ಷೌರಿಕನಿಗೆ ಜೇಳು ಕುಟುಕಿತಂತೆ, ಬರಲಿಲ್ಲ. ನನ್ನ ಶರೀರವೆಲ್ಲ ನೋವಾಗಿರುವುದರಿಂದ, ಈ ದಿನ ಪರೀಕ್ಷೆ ಬೇಡ, ಹೋಗಿಬನ್ನಿ" ಎಂದನು.

ನಾಲ್ವರೂ ಅಲ್ಲಿಂದ ಹಿಂದಿರುಗಿದರು. ಅವರಲ್ಲಿ ಒಬ್ಬನು ಮಾತ್ರ ಕೆಲವು ಹಜ್ಜೆ ಹೋಗಿ ತಿರುಗಿ ಬಂದು, "ಕ್ಷೌರಿಕ ಬಾರದೆ ಹೋದ ಮಾತ್ರಕ್ಕೆ ತಾವು ಕಷ್ಟ ಪಡಬೇಕೇ ? ದೇವರಿಗೆ ಸಮಾನರಾದ ನಿಮಗೆ ಸೇವೆ ಮಾಡುವುದು ನಮ್ಮ ಧರ್ಮವಲ್ಲವೇ ?" ಎಂದು ಹೇಳಿ ರಾಜನು ಬೇಡಬೇಡವೆಂದರೂ ಕೇಳದೆ, ರಾಜನ ಶರೀರಕ್ಕೆ ಎಣ್ಣೆಯೊತ್ತಿ ತಿಕ್ಕಿ ಶರೀರ ಮರ್ದನ ಮಾಡಿ ಸ್ನಾನಮಾಡಿಸಿದನು. ಅವನಿಗೆ ಸೇನಾಧಿಪತಿ ಪದವಿ ಲಭಿಸಿತು. ಅವನ ಹೆಸರು ಶೂರವರ್ಮ, ಆಮೇಲೆ ಕೆಲವು ತಿಂಗಳು ಕಳೆಯುತ್ತಿರಲು

ಪದವಿಯೊಂದು ಖಾಲಿಯಾಯಿತು. ಕ್ಷೌರಿಕ ಸಂಪಾದಿಸಿ ತನ್ನ ಗೆಳೆಯನಾದ ಮಹಾಮಂತ್ರಿಗೆ ಆ ಮುದ್ರಿಕೆಯನ್ನು ಸಂಪಾದನೆ ಮಾಡಿಕೊಳ್ಳುವ ಉಪಾಯವನ್ನು ಹೇಳಿದನು. ಮಹಾಮಂತ್ರಿ ಬೆಳಿಗ್ಗೆ ರಾಜನ ಬಳಿಗೆ ಬಂದು ಮಾಲೀಸ್ ಅಂದರೆ ಮರ್ದನ ಮಾಡಿ ಮಂತ್ರಿಪದವಿಯನ್ನು ಸಂಪಾದಿಸಿಕೊಂಡನು.

ಅಂದಿನಿಂದ ಮುಖ್ಯವಾದ ಪದವಿಗಳು ಖಾಲೀ ಯಾದಾಗಲೆಲ್ಲಾ ರಾಜನು ತನಗೆ ಚೆನ್ನಾಗಿ ಮಾಲೀಸ್ ಮಾಡುವವನಿಗೇ ಆ ಪದವಿಯನ್ನು ಕೊಡುತ್ತಿದ್ದನು. ಆದರೆ ಕೆಲವುಬಗೆಯ ಉದ್ಯೋಗಗಳಿಗೆ ಸ್ಪರ್ಧೆಯೋ ಪರೀಕ್ಷೆಗಳೋ ಅಗತ್ಯವಿರಲಿಲ್ಲ. ಆಸ್ಥಾನ ಪುರೋಹಿ ತನ ಪದವಿ ಖಾಲಿಯಾದರೆ ಹಳೆಯ ಪುರೋಹಿತನ ಈದಿನ ಹೊರತು ಅದಕ್ಕೆ ತಕ್ಕವನು ಬೇರೊಬ್ಬನು ಬದುಕಿದಿಲ್ಲ. ಇಂತಹ ಸಂದರ್ಭಗಳಲ್ಲಿ ತನಗೆ ಮಾಲೀಸ್ ಮಾಡದಿರುವವರಿಗೆ ತಾನು ಉದ್ಯೋಗ ಕೊಡಬೇಕಾಗಿ ಬಂದಾಗ ರಾಜನಿಗೆ ಸಂಕಟವಾಗು ತ್ತಿತ್ತು. ಕಡೆಗೆ ರಾಜನು ಏನು ಮಾಡಿದನೆಂದರೆ ತನ್ನ ಕೈಕೆಳಗೆ ಉದ್ಯೋಗದಲ್ಲಿ ಸೇರುವ ಪ್ರತಿಯೊಬ್ಬನೂ ಮೊದಲನೇದಿನ ತನಗೆ ಮಾಲೀಸ್ ಮಾಡಲೇ ಬೇಕೆಂದು ನಿಯಮವನ್ನು ಅಮಲು ಪಡಿಸಿದನು.

ಈ ರೀತಿಯಾಗಿ ದಿನಗಳು ಉರುಳುತ್ತಿರಲು, ರಾಜ ನಿಗೆ ಯಾವುದೋ ಚರ್ಮವ್ಯಾಧಿ ಅಂಟಿಕೊಂಡಿತು. ಚಿಕಿತ್ಸೆ ಮಾಡುವ ರಾಜವೈದ್ಯರು ರಾಜನನ್ನು ಕುರಿತು "ತಾವು ಕಂಡ ಕಂಡವರಿಂದ ಮಾಲೀಸು ಮಾಡಿಸಿ ಕೊಳ್ಳುವುದರಿಂದಲೇ ಇದು ಬಂದಿದೆ. ಯಾವನೋ ಒಬ್ಬನ ರೋಗ ನಿಮಗೆ ಸಂಕ್ರಮಿಸಿದೆ. ಇದೀಗ ಚಿಕಿತ್ಸೆಯಿಂದ ಗುಣವಾದರೂ, ಇನ್ನು ಮೇಲೆ ಎಚ್ಚ ರಿಕೆಯಲ್ಲಿರಬೇಕು." ಎಂದರು.

ಅದು ರಾಜನ ಮನಸ್ಸಿಗೆ ನಾಟಿತು. ಅವನ ಚರ್ಮವ್ಯಾಧಿ ಗುಣವಾಗುವುದರೊಂದಿಗೆ ಮಾಲೀಸ್ ಶಾಸನವೂ ರದ್ದಾಯಿತು. ರಾಜನು ಈ ಸಂಗತಿಯನ್ನು ಕ್ಷೌರಿಕನೊಂದಿಗೆ ಹೇಳಿದನು. ಕ್ಷೌರಿಕನು "ರಾಜಭಕ್ತಿ ಯನ್ನು ಪ್ರದರ್ಶಿಸಲಿಕ್ಕೆ ಮಾಲೀಸ್ ಒಂದೇ ಮಾರ್ಗ ವೇನಲ್ಲ. ನೀವು ಸುಮ್ಮನೆ ಬಯ್ಯುತ್ತಿದ್ದರೂ ನಗುತ್ತಾ ಸಹಿಸಿಕೊಂಡು ಕ್ಷಮಾಪಣೆ ಕೇಳುವವನೂ ರಾಜಭಕ್ತಿ ಯುಳ್ಳವನೇ." ಎಂದನು.

ಈ ಹೊಸ ಸೂತ್ರದ ಮೇಲೆ ರಾಜನು ತನ್ನ ಆಸ್ಥಾನದಲ್ಲಿ ಖಾಲಿಬಿದ್ದ ಜಾಗೆಯನ್ನು ತುಂಬಿಸುತ್ತಾ ಇದ್ದನು. ನಿಜವಾದ ಮಾಲೀಸ್ ಪದ್ಧತಿ ಹೋದರೂ ಅದೊಂದು ಪಡಿನುಡಿಯಾಗಿ ವಾಡಿಕೆಯಲ್ಲಿದ್ದು ಹೋಯಿತು. ಯಾವನಾದರೂ ಅರ್ಹತೆಯಿಲ್ಲದವನು ಉದ್ಯೋಗವನ್ನು ಸಂಪಾದಿಸಿದರೆ. "ಅವನು ಯಾರಿಗೋ ಮಾಲೀಸ್ ಮಾಡಿರಬೇಕು" ಎಂದು ಈಗಲೂ ಹೇಳುತ್ತಾರೆ.



# ಕತ್ತೆ ಹೊರೆ

**ಒಂ**ದು ಗ್ರಾಮದಲ್ಲಿ ಬೊಂಗ್ರುನೆಂಬ ಅಗಸನಿಗೆ ಮನೆ ತುಂಬಾ ಮಕ್ಕಳು. ಈ ಕುಟುಂಬದ ಭಾರವನ್ನು ಹೊರಲಾರದೆ ಬೊಂಗ್ರು ಒಂದು ದಿನ ಮನೆಯಿಂದ ಪತ್ತೆಯಿಲ್ಲದೆ ಓಡಿ ಹೋಗಿಬಿಟ್ಟ.

ಆ ಮೇಲೆ ಬೊಂಗ್ರುನ ಹಿರಿಯ ಮಗ ಹದಿಮೂರು ವರ್ಷದ ಹುಡುಗ ಆ ಕುಟುಂಬವನ್ನು ಕಾಪಾಡುವವನಾಗಿ ಭಾರ ಹೊತ್ತು ನಡೆಸಿಕೊಂಡಿದ್ದ. ಚಿಕ್ಕವನಾದರೂ ತಂದೆಯ ದುಡಿತಕ್ಕಿಂತ ಹೆಚ್ಚೇ ದುಡಿದು ಹೇಗೋ ಮನೆ ನಡೆಸಿಕೊಂಡಿದ್ದ ಆ ಹುಡುಗ.

ಐದು ವರ್ಷಗಳ ಮೇಲೆ ಬೊಂಗ್ರು ಹಿಂದಿರುಗಿ ಮನೆಗೆ ಬಂದ. ಮನೆ ಎಂದಿನಂತೆ ಸಾಗುವುದನ್ನು ನೋಡಿ ಆಶ್ಚರ್ಯಪಟ್ಟ. ಆ ಮೇಲೆ ಗೊತ್ತಾಯಿತು; ತನ್ನಿಂದ ಹೊರಲಾಗದ ಭಾರವನ್ನು ತನ್ನ ಮಗನು ಹೊತ್ತಿರುವುದನ್ನು ನೋಡಿ ಸಂತೋಷಪಟ್ಟ.

ತನ್ನ ತಂದೆ ಇನ್ನು ತನ್ನ ಭಾರವನ್ನು ಸ್ವಲ್ಪ ತಗ್ಗಿಸುತ್ತಾನೆಂದು ಆ ಮಗನೂ ಸಂತೋಷಪಟ್ಟ.

ಆದರೆ ಬೊಂಗ್ರು ಮನೆಗೆ ಬಂದ ಮೇಲೆ ಮಗನಿಗೆ ಯಾವ ವಿಧದಿಂದಲೂ ಸಹಾಯಮಾಡದೆ ಸುಮ್ಮನೆ ತಿಂದು ಕುಳಿತಿರುತ್ತಿದ್ದ.

ಕೆಲವು ದಿನಗಳ ಮೇಲೆ ಮಗನು ತಂದೆಗೆ ಬುದ್ಧಿ ಕಲಿಸಬೇಕೆಂದುಕೊಂಡು, ಬೊಂಗ್ರುನ ಎದುರಿನಲ್ಲಿ, ಕತ್ತೆಯ ಮೇಲೆ ಅದು ಹೊರುವಷ್ಟು ದೊಡ್ಡ ಒಚ್ಚೆಯನ್ನು ಹಾಕಿದ. ಆ ಮೇಲೆ ಇದ್ದಕ್ಕಿದ್ದ ಹಾಗೆ ಅದರ ಮೇಲೆ ತಾನೂ ಚಂಗನೆ ಹಾರಿ ಕುಳಿತ.

ಅದನ್ನು ನೋಡಿ ಬೊಂಗ್ರು "ಅರೆರೇ ! ಕತ್ತೆಯನ್ನು ಕೊಲ್ಲುವಿಯೇನೋ ?' ಅದಕ್ಕೆ ಹೇರಿದ ಭಾರ ಸಾಲದೆ ನೀನೂ ಹಾರಿ ಕುಳಿತುಕೊಳ್ಳುವುದುಂಟೇ ? " ಎಂದ.

"ಅದೇ ನಾನು ಕೂಡಾ ಕೇಳಬೇಕೆಂದಿದ್ದೇನೆ. ನಾನು ಹೊರುವ ಭಾರ ಸಾಲದೆಂತಲೋ ನೀವು ನನ್ನ ಕುತ್ತಿಗೆ ಮೇಲೆ ಹತ್ತಿ ಕೂತಿದ್ದೀರಿ ? " ಎಂದ ಮಗ.

'ಕೂಡಲೇ ಬೊಂಗ್ರುನಿಗೆ ಬುದ್ಧಿ ಬಂತು.





# ಅಡ್ಡದಾರಿ

ಹಿಂದೆ ಒಂದು ಕಾಲದಲ್ಲಿ ಶಂಕರಪುರವೆಂಬ ಊರಿನಲ್ಲಿ ರಾಮಶರ್ಮನೆಂಬ ನಿರ್ಗತಿಕನಾದ ಬ್ರಾಹ್ಮಣನೊಬ್ಬನಿದ್ದ. ಅವನು ಊರಿನವರು ಹೇಳಿದ ಕೆಲಸಗಳನ್ನು ಮಾಡುತ್ತ, ಅವರು ಬಡಿಸಿದುದನ್ನು ಉಣ್ಣುತ್ತ, ರಾತ್ರಿಯಾದ ಮೇಲೆ ಭಜನೆ ಮಂಟಪ ಸೇರಿ ಮಲಗುತ್ತಿದ್ದನು. ಆ ಮಂಟಪದಲ್ಲಿ ಆಗಾಗ ಹರಿಕಥೆ ಮೊದಲಾದ ಕಾಲಕ್ಷೇಪಗಳು ನಡೆಯುತ್ತಿದ್ದವು. ರಾಮಶರ್ಮನು ಅದನ್ನು ಕೇಳುತ್ತಾ ಎಚ್ಚರದಿಂದಿರುವನು. ಹೀಗೆ ತುಂಬಾ ಹರಿಕಥೆಗಳನ್ನು ಕೇಳುತ್ತಿದ್ದಂತೆ ಅವನಿಗೆ ಸ್ವರ್ಗಲೋಕ, ಇಂದ್ರನ ವೈಭವ, ಅಪ್ಸರಸಿಯರ ನಾಟ್ಯ, ಸ್ವರ್ಗಸುಖಗಳ ವರ್ಣನೆ ಮೊದಲಾದುವು ಚೆನ್ನಾಗಿ ತಲೆಗೇರಿದುವು.

ಒಂದು ದಿನ ಹರಿಕಥೆ ಹೇಳುವ ಹರಿದಾಸರು ಒಬ್ಬರೇ ವಿಶ್ರಾಂತಿಯಾಗಿದ್ದ ಸಮಯದಲ್ಲಿ ಅವನು ಅವರ ಬಳಿಗೆ ಹೋಗಿ, ಸ್ವರ್ಗ ಸೌಖ್ಯಗಳನ್ನು ಪಡೆಯುವ ಸುಲಭ ದಾರಿ ಯಾವುದೆಂದು ಕೇಳಿದನು. ನಿನ್ನ ಕೆಲಸ ಮಾಡಿಕೊಂಡಿದ್ದರೆ ಸಾಕೆಂದರು ಹರಿದಾಸರು. ಆ ಮಾತು ರಾಮಶರ್ಮನಿಗೆ ತೃಪ್ತಿಯುಂಟುಮಾಡಲಿಲ್ಲ. ಇವರೇನೋ ಗುಟ್ಟು ಬಚ್ಚಿಟ್ಟುಕೊಳ್ಳುತ್ತಿದ್ದಾರೆನಿಸಿ, "ಹಾಗಲ್ಲ ಸ್ವಾಮಿ, ಹೇಳಿ ಬಿಡಿ. ನನಗೆ ಇಹಸುಖಗಳ ಮೇಲೆ ಆಶೆಯೇನಿಲ್ಲ. ಆದಷ್ಟು ಬೇಗದಲ್ಲೇ ಮಹಾಸುಖವಾದ ಸ್ವರ್ಗವನ್ನು ಸೇರಬೇಕೆಂದಿದ್ದೇನೆ" ಎಂದನು.

ಹರಿದಾಸರು ಬೇಸತ್ತು, "ವೈಕುಂಠ ಏಕಾದಶಿಯ ದಿನ ಯಾವ ಗಂಗೆಯಲ್ಲಾದರೂ ಧುಮುಕು. ಸ್ವರ್ಗವನ್ನು ತಲಪುತ್ತಿ" ಎಂದರು.

ತೃಪ್ತನಾದ ರಾಮಶರ್ಮ ಆ ರಾತ್ರಿಯಲ್ಲೇ ಅಲ್ಲಿಂದ ಹೊರಟನು. ನಡೆಯುತ್ತ ನಡೆಯುತ್ತ, ಬೆಟ್ಟ, ಗುಡ್ಡ, ಕಣಿವೆ, ಕಾಡು, ನಾಡುಗಳನ್ನೆಲ್ಲ ದಾಟುತ್ತಾ ವೈಕುಂಠ ಏಕಾದಶಿಯ ದಿನ ಗಂಗಾತೀರವನ್ನು ತಲಪಿದನು. ಆಮೇಲೆ ಕಣ್ಣು ಮುಚ್ಚಿ ಕೈಮುಗಿದು ಗಂಗೆಯೊಳಗೆ ಧುಮುಕಿದನು.

ಅವನಿಗೆ ಎಚ್ಚರವಾದಾಗ ತಾನು ನರಕ ಲೋಕದಲ್ಲಿರುವೆನೆಂದು ಕಂಡುಕೊಂಡನು. ಅವನ ಎದುರಿನಲ್ಲಿ ಯಮಧರ್ಮರಾಜನೂ ಚಿತ್ರಗುಪ್ತರೂ ನಿಂತಿದ್ದರು. ಅದನ್ನು ನೋಡಿ, ರಾಮಶರ್ಮ ಹತಾಶನಾಗಿ, "ನಾನು ಇಲ್ಲಿಗೆ ಹೇಗೆ ಬಂದೆ? ಮಹಾಪುಣ್ಯ ದಿನದಲ್ಲಿ ಆತ್ಮತ್ಯಾಗ ಮಾಡಿದವನು ಇಂತಹ ನರಕಕ್ಕೆ

**ಟಿ. ಆರ್. ಪ್ರಸಾದ್**

ಬರುವುದೆಂದರೇನು ಅನ್ಯಾಯ ?" ಎಂದು ಕೋಪದಿಂದ ಚಿತ್ರಗುಪ್ತರನ್ನು ಕೇಳಿದನು.

"ಅದೇನೋ ನಿಜವಪ್ಪ. ಆದರೆ ನಿನಗೆ ಇನ್ನೂ ಆಯುಷ್ಯವಿದೆ. ಮಾನವ ಜನ್ಮ ಎತ್ತಿದ್ದಕ್ಕೆ ಮಾಡಬೇಕಾದ ವಿಧಿಗಳೆಲ್ಲ ತೀರಿದ ಹೊರತು ನಿನಗೆ ಸ್ವರ್ಗ ಸಿಗಲಾರದು" ಎಂದರು ಚಿತ್ರಗುಪ್ತರು.

"ಇನ್ನು ನೀನು ಹೋಗಬಹುದು" ಎಂದು ಯಮನು ಕೈಯಾಡಿಸಿದನು. ಆಗ ರಾಮಶರ್ಮ ಗಿರಿಗಿರಿ ತಿರುಗುತ್ತ ಭೂಮಿಗೆ ಎರಗಿ ಗಂಗಾನದಿಯ ತೀರದಲ್ಲಿ ಬಿದ್ದನು.

ಅವನು ಎದ್ದು ಮೈಯನ್ನು ಝಾಡಿಸಿಕೊಂಡು ಸಮೀಪದಲ್ಲಿದ್ದ ಒಂದು ಪಟ್ಟಣಕ್ಕೆ ಹೋದನು. ಅಲ್ಲಿ ಒಬ್ಬ ವರ್ತಕನ ಮನೆಯಲ್ಲಿ ಅಡಿಗೆ ಮುಂತಾದ ಚಾಕರೀ ಕೆಲಸಕ್ಕೆ ಸೇರಿ, ಬೇಗದಲ್ಲೇ ಅವರ ಕುಟುಂಬದಲ್ಲಿ ಒಬ್ಬನಾಗಿ ಅಂಟಿಕೊಂಡನು. ಅವನನ್ನು ಮೆಚ್ಚಿದ ವರ್ತಕನು ಅವನಿಗೆ ತನ್ನ ಮಗಳನ್ನೇ ಕೊಟ್ಟು ಮದುವೆ ಕೂಡಾ ಮಾಡಿ, ತನ್ನ ವ್ಯಾಪಾರವನ್ನೂ ಅವನಿಗೇ ಒಪ್ಪಿಸಿದನು. ಜವಾಬ್ದಾರಿ ಹೆಚ್ಚಾಯಿತು. ಕಾಲಕ್ರಮದಲ್ಲಿ ರಾಮಶರ್ಮನಿಗೆ ಇಬ್ಬರು ಮಕ್ಕಳು ಹುಟ್ಟಿದರು. ಆ ಮಕ್ಕಳು ಸ್ವಲ್ಪ ದೊಡ್ಡವರಾಗುವಾಗ ಅವನಿಗೆ ಮತ್ತೆ ಸ್ವರ್ಗದ ನೆನಪು ಬಂತು. ಮನುಷ್ಯ ಜನ್ಮ ಎತ್ತಿದುದಕ್ಕೆ ಮದುವೆಯಾಗಿ ಸಂಸಾರಸುಖ ಅನುಭವಿಸಿಯಾಯಿತಲ್ಲ ? ಮಕ್ಕಳು ಹುಟ್ಟಿದುದರಿಂದ ವಿಧಿಗಳನ್ನೂ ಮುಗಿಸಿದಂತಾಯಿತು. ಇನ್ನು ಸ್ವರ್ಗಸುಖಕ್ಕೆ ಹೋಗಲು ಅಭ್ಯಂತರವೇನಿಲ್ಲವಷ್ಟೆ ? ಹೀಗೆಂದುಕೊಂಡು ಅವನು ಯಾರಿಗೂ ಏನೂ ಹೇಳದೆ ಹೊರಟುಹೋಗಿ ಗಂಗೆಯಲ್ಲಿ ಹಾರಿದನು. ಈ ಸಾರಿ ಕೂಡಾ ಅವನು ಹೋಗಿ ಸೇರಿದ್ದು ನರಕಲೋಕವನ್ನೇ.

ಯಮಧರ್ಮರಾಜನು ಅವನನ್ನು ನೋಡಿ ಸಿಟ್ಟಿನಿಂದ, "ನಿನ್ನ ಕರ್ಮಗಳೆಲ್ಲ ಪರಿಪಕ್ವವಾಗಿ ತೀರುವ ಮೊದಲೇ ಅವಸರಪಟ್ಟು ಪುನಃ ಬಂದೆಯೇಕೆ ? ಯಾರು ಕರೆದರು ನಿನ್ನನ್ನು ?" ಎಂದು ಕೇಳಿದನು. "ನೀವು ಹೇಳಿದ ಹಾಗೆ ಎಲ್ಲಾ ಕಾರ್ಯಗಳನ್ನೂ



ಮಾಡಿ ಮುಗಿಸಿದೆನಲ್ಲ? ಇನ್ನು ಮಾಡಬೇಕಾದುದು ನನಗೇನೂ ಕಾಣುವುದಿಲ್ಲ" ಎಂದು ರಾಮಶರ್ಮ ಎಂಜಲು ನುಂಗುತ್ತಾ ಹೇಳಿದ.

"ಮೂರ್ಖ ಮನುಷ್ಯನೇ! ನಿನ್ನ ಆಯುಷ್ಯ ಇನ್ನೂ ಪೂರಾ ತೀರಲಿಲ್ಲ. ನೀನು ಮುದುಕನಾಗಿ ಸಹಜ ಮರಣ ಪಡೆಯುವವರೆಗೂ ಇಲ್ಲಿಗೆ ಬರ ಬಾರದು, ತಿಳಿಯಿತೇ? ಹೋಗು!" ಎಂದು ಹೇಳಿ ಯಮಧರ್ಮನು ಅವನನ್ನು ಕಳುಹಿಸಿಬಿಟ್ಟನು.

ಮತ್ತೆ ಭೂಮಿಗೆ ಬಂದು ಮನೆ ಸೇರಿದ. ಕಾಲವು ಸಾಗಿತು. ರಾಮಶರ್ಮ ಕ್ರಮವಾಗಿ ಸಂಸಾರದ ಬಂಧನದಲ್ಲಿ ಸಿಕ್ಕಿಕೊಂಡನು. ಅವನ ಮಕ್ಕಳು ದೊಡ್ಡವರಾದರು. ಅವರಿಗೆ ಮದುವೆಯಾಯಿತು. ರಾಮಶರ್ಮನಿಗೆ ಮೊಮ್ಮಕ್ಕಳೂ ಹುಟ್ಟಿದರು. ಈಗ ಅವನಲ್ಲಿ ನನ್ನ ಮನೆ, ನನ್ನ ಕುಟುಂಬ ಎಂಬ ಮಮಕಾರ ಬಲವಾಗಿ ಬೇರೂರಿತ್ತು. ಅವನೂ ಸಾಕಷ್ಟು ಮುದುಕನಾಗಿದ್ದ. ಪರಲೋಕಗಳ ಯಾವ ವಿಚಾರವೂ ಈಗ ಅವನಲ್ಲಿರಲಿಲ್ಲ.

ಒಂದು ದಿನ ರಾಮಶರ್ಮ ತನ್ನ ಮೊಮ್ಮಗನನ್ನು ತೊಡೆಯಲ್ಲಿ ಕೂಡಿಸಿಕೊಂಡು ಆಟವಾಡಿಸುತ್ತಿರು ವಾಗ ಯಮದೂತರು ಬಂದು ಅವನಿದಿರು ನಿಂತರು. ಅವರನ್ನು ನೋಡಿ ರಾಮಶರ್ಮನು ಆಶ್ಚರ್ಯಪಟ್ಟು, "ಆಗಲೇ ನನ್ನ ಹತ್ತಿರ ಬಂದಿರೇಕೆ? ನನಗಿನ್ನೂ ತುಂಬಾ ಕಾಲ ಆಯುಷ್ಯವಿದೆಯಲ್ಲಾ! ಗಟ್ಟಿಮುಟ್ಟಾಗಿದ್ದೇನಲ್ಲ?" ಎಂದ.

"ಅದೆಲ್ಲಾ ನಾವರಿಯೆವು. ನಿನ್ನ ಆಯುಷ್ಯದ ಲೆಕ್ಕ ಮುಗಿಯಿತು. ಕೂಡಲೇ ನಿನ್ನನ್ನು ತರಲು ಆಜ್ಞೆಯಾಗಿದೆ" ಎನ್ನುತ್ತಾ ಯಮದೂತರು ಪಾಶ ಬೀಸಿ ಕಟ್ಟಿ ರಾಮಶರ್ಮನನ್ನು ಎತ್ತಿಕೊಂಡು ಹೋದರು. ಯಮಧರ್ಮರಾಜನು ರಾಮಶರ್ಮನನ್ನು ನೋಡಿ ನಕ್ಕು, "ನಿನ್ನ ಕೋರಿಕೆ ತೀರಿತಷ್ಟೇ? ಮೊದಲು ಶಿಕ್ಷೆ ಅನುಭವಿಸು" ಎಂದನು.

"ಶಿಕ್ಷೆ? ನನಗೆ? ಅನ್ಯಾಯ! ನೀವು ಹೇಳಿದಂತೆಯೇ ಎಲ್ಲಾ ಮಾಡಿದ್ದೇನೆ. ನನಗೇಕೆ ಶಿಕ್ಷೆ?" ಎಂದು ರಾಮಶರ್ಮ ಕೇಳಿದ.

"ನೀನು ಚಿತ್ತಶುದ್ಧಿಯಿಂದ ನಿನ್ನ ಕರ್ತವ್ಯ ಕರ್ಮಗಳನ್ನು ನಿರ್ವಹಿಸಲಿಲ್ಲ. ಸ್ವರ್ಗ ಸೌಖ್ಯಗಳಿಗಾಗಿ ಅಡ್ಡದಾರಿ ತುಳಿದವನು. ನಿನಗೆ ಸ್ವರ್ಗಸುಖವು ಸ್ವಲ್ಪ ಮಾತ್ರವೇ ಸಿಗುತ್ತದೆ. ಅದು ಕೂಡಾ ನೀನು ನಿನ್ನವರ ಮೇಲೆ ಅನುರಾಗತೋರಿಸಿದ ಪುಣ್ಯದಿಂದ. ಉಳಿದ ಪಾಪಗಳಿಗೆ ಮೊದಲು ನರಕದ ಶಿಕ್ಷೆ ಅನುಭವಿಸಿದ ಮೇಲೆ, ಸ್ವರ್ಗದಲ್ಲಿ ಸ್ವಲ್ಪ ಸುಖವನ್ನೂ ಅನುಭವಿಸುವೆ" ಎಂದು ಯಮಧರ್ಮರಾಜನು ಕೈಯಾಡಿಸಿದನು. ಯಮದೂತರು ಅವನನ್ನು ನರಕಕ್ಕೆ ಕರೆದುಕೊಂಡುಹೋದರು.





# ಮೂರ್ಖರು

ಅನೇಕ ವರ್ಷಗಳ ಹಿಂದೆ ರಾಜಾತೋಟವೆಂಬ ಗ್ರಾಮದಲ್ಲಿ ನಾರಾಯಣಬಾವನೆಂಬ ಧನವಂತನೊಬ್ಬನಿದ್ದ. ಪಿತರಾರ್ಜಿತವಾಗಿ ಬಂದ ಆಸ್ತಿಯ ಬಲದಿಂದ ಅವನು ಸಮುದ್ರ ವ್ಯಾಪಾರವನ್ನು ಮಾಡಿ ತುಂಬಾ ಲಾಭ ಸಂಪಾದಿಸಿ ಸ್ವಂತ ಊರಿನಲ್ಲಿ ನೆಲ ಹೊಲ ತೋಟಗಳನ್ನು ಕೊಂಡುಕೊಂಡು ಭಾರೀ ದೊಡ್ಡವನಾದ. ಹೀಗೆ ನಾರಾಯಣಬಾವನಿಗೆ ಹಿರಿತನ ಬಂದ ಮೇಲೆ ಅವನ ಮಗಂದಿರು ವ್ಯಾಪಾರ ಕಾರ್ಯ ನೋಡಿಕೊಳ್ಳುತ್ತಿದ್ದರು.

ನಾರಾಯಣಬಾವನಿಗೆ ಸಿಂತ್ರೀಬಾವನೆಂಬ ಜ್ಞಾತಿಯೊಬ್ಬನಿದ್ದ. ಹುಲಿಯನ್ನು ನೋಡಿ ನರಿಕಾಯಿಸಿಟ್ಟುಕೊಂಡಿತು ಎಂಬ ಗಾದೆಯಂತೆ ಈ ಸಿಂತ್ರಿಬಾವ ಎಲ್ಲದರಲ್ಲಿಯೂ ನಾರಾಯಣಬಾವನನ್ನು ಮೀರಿಸಬೇಕೆಂದು ಸ್ಪರ್ಧೆಗಿಳಿದು ಭಾರೀ ಪೆಟ್ಟು ತಿಂದ. ಆದರಿಂದಾಗಿ ಅವನಿಗೆ ನಾರಾಯಣಬಾವನ ಮೇಲೆ ತುಂಬಾ ಹಗೆಯುಂಟಾಯಿತು.

ಕೆಲಸವೇನೂ ಇಲ್ಲದುದರಿಂದ ಪ್ರತಿದಿನ ಸಾಯಂಕಾಲ ನಾರಾಯಣಬಾವ ಊರೊಳಗಿನ ಹರಟೆ ಕಟ್ಟೆಯಲ್ಲಿ ಬಂದು ಕೂಡುತ್ತಿದ್ದ. ಒಂದು ದಿನ ನಾರಾಯಣಬಾವ ಹರಟೇ ಕಟ್ಟೆಯ ಮೇಲೆ ಮಾತಾಡುತ್ತ, "ನಮ್ಮ ಪಕ್ಕದ ಜಮೀನ್ದಾರರಿದ್ದಾರಲ್ಲ, ತುಂಬ ಅಶ್ರದ್ಧೆಯ ಮನುಷ್ಯ. ಅವರಿಗೆ ರೈತರ ಗೇಣಿ ಬೇಕೇ ಹೊರತು ಅವರ ಕಷ್ಟಸುಖಗಳ ಚಿಂತೆಯಿಲ್ಲ. ಪ್ರತಿವರ್ಷವೂ ಊರಕೆರೆಗೆ ನೆರೆಬಂದು ಹೊಲ ಗದ್ದೆಗಳು ನಾಶವಾಗುತ್ತವಷ್ಟೆ? ಕಲ್ಲಿನಿಂದೊಂದು ಬಲವಾದ ಗೋಡೆ ಕಟ್ಟಿಬಿಟ್ಟರೆ ಆ ಕಷ್ಟ ತಪ್ಪುತ್ತೆ. ನಾನೊಂದು ನಿಶ್ಚಯಕ್ಕೆ ಬಂದೆ. ಅದಕ್ಕಾಗುವ ಅರ್ಧಖರ್ಚು ನನ್ನದು; ಉಳಿದದ್ದು ನೀವೆಲ್ಲಾ ಕೂಡಿ ಭರಿಸಿರಿ ನೋಡುವಾ" ಎಂದ. ಅಲ್ಲಿ ಸೇರಿದವರು "ಸರಿ ಸರಿ" ಎಂದು ಒಪ್ಪಿದರು.

ಈ ಸಂಗತಿ ಸಿಂತ್ರೀಬಾವನಿಗೆ ಗೊತ್ತಾಯಿತು. ಕೂಡಲೇ ಅವನು ಒಬ್ಬೊಬ್ಬರ ಹತ್ತಿರವೂ ಹೋಗಿ, "ನೀವೆಲ್ಲಾ ಎಂಥಾ ಹುಚ್ಚರು! ನಾರಾಯಣಬಾವ ನಿಮಗೆ ಒಳ್ಳೇ ಮಂತ್ರಹಾಕಿದ. ಕೆರೆಗೆ ನೆರೆಬಂದರೆ ಅವನ ಹೊಲಗಳೇ ಮುಳುಗುವುದು; ಉಳಿದವರ ಹೊಲಗಳು ಮುಳುಗಿದರೂ ಬೆಳೆಗೆ ನಷ್ಟವೇನೂ ಬರುವುದಿಲ್ಲ. ಆತ ತನ್ನ ಅಗತ್ಯಕ್ಕಾಗಿ ಗೋಡೆ ಕಟ್ಟುವುದಾದರೆ ಅರ್ಧ ಖರ್ಚನ್ನು ಊರವರ ಮೇಲೆ

ಸಿ. ರಾಜೇಶ್ವರ

ಹಾಕುತ್ತಾನಲ್ಲ ! ಅದನ್ನು ನಂಬುತ್ತೀರಲ್ಲ !" ಎಂದ. ಅದರಿಂದಾಗಿ ಎಲ್ಲರೂ ಹಿಂಜರಿದು ಸುಮ್ಮನಾದರು.

ಮತ್ತೊಮ್ಮೆ ಹರಟೇ ಕಟ್ಟೇ ಮೇಲೆ ನಾರಾಯಣ ಬಾವ, "ನಮ್ಮೂರ ಕಾಲುವೆಗೆ ಒಂದು ಸಂಕ ಹಾಕಿಬಿಟ್ಟರೆ ಊರೊಳಗೆ ಬರುವವರಿಗೂ, ಹೋಗುವವರಿಗೂ ಸೌಕರ್ಯವಾಗಿರುತ್ತೆ. ಅದರ ಖರ್ಚಿನಲ್ಲಿ ಮೂರು ಭಾಗ ನಾನು ಹಾಕುತ್ತೇನೆ. ಉಳಿದದ್ದು ನೀವೆಲ್ಲರೂ ಭರಿಸಿರಿ !" ಎಂದನು.

ಹಾಗೆ ಮಾಡಿದರೆ ಚೆನ್ನಾಗಿರುವುದೆಂದು ಎಲ್ಲರೂ ಒಪ್ಪಿಕೊಂಡರು. ಆದರೆ ಸಿಂತ್ರೀಬಾವ ಮತ್ತೆ ಅವರಿಗೆಲ್ಲ ಅಡ್ಡ ನಿಂತು, "ಸಂಕ ಕಟ್ಟಿಬಿಟ್ಟರೆ ನಾರಾಯಣ ಬಾವನ ಸರಕುಗಳ ಗಾಡಿ ನೇರಾಗಿ ಊರಿಗೆ ಬರುತ್ತೆ. ಉಳಿದವರಿಗೆ ಏನು ಲಾಭ ? ಸಣ್ಣ ದೋಣಿಯಲ್ಲೇ ನಮ್ಮ ಕೆಲಸ ಆಗುವುದಿಲ್ಲವೇನು ಎಂದಿನಂತೆ ? ಬೇಕಾದರೆ ಅವನೇ ಕಟ್ಟಲಿ" ಎಂದನು. ಮತ್ತೆ ಊರವರು ಸುಮ್ಮನಿದ್ದುಬಿಟ್ಟರು. ಆದಾದ ಮೇಲೆ ಒಂದು ದಿನ ನಾರಾಯಣಭಾವ, "ಪೂರ್ವ ದಿಕ್ಕಿನಲ್ಲಿ ನನಗೊಂದು ಸಣ್ಣ ಕಾಡು ಇದೆಯಷ್ಟೆ ? ಅದನ್ನು ಸುಟ್ಟು ಯಾರಾದರೂ ಇದ್ದಲಿಯಾಗಿ ಮಾಡಿಕೊಳ್ಳುವುದಾದರೆ ನನ್ನದೇನೂ ಅಭ್ಯಂತರವಿಲ್ಲ" ಎಂದನು.

ಕೂಡಲೇ ಅನೇಕ ಮಂದಿ ಹಿರಿಯರು ಅವಸರವಸರವಾಗಿ ಹೋಗಿ ಸಣ್ಣ ಕಾಡಿಗೆ ಬೆಂಕಿ ಹಚ್ಚಿದರು. ಕಾಡೆಲ್ಲಾ ಸುಡತೊಡಗಿತು. ಆ ಪೂರ್ವ ದಿಕ್ಕಿನಿಂದ ಗಾಳಿ ಬೀಸಿದುದರಿಂದ ಊರೊಳಗಿನ ಕೆಲವು ಮನೆಗಳೂ ಸುಟ್ಟವು. ಸಿಂತ್ರೀಬಾವ ಹಿರಿಯರನ್ನು ನಾರಾಯಣಬಾವನ ಕಡೆಗೆ ಛೂಬಿಟ್ಟನು. ಅವರು ನಾರಾಯಣಬಾವನ ಮನೆಗೆ ಬಂದು, "ನಿಮ್ಮಿಂದ ಊರಿಗೆ ಬಹಳ ನಷ್ಟವಾಯಿತು. ಆ ನಷ್ಟವನ್ನೆಲ್ಲ ನೀವೇ ವಹಿಸಿಕೊಳ್ಳಬೇಕು" ಎಂದರು.

ನಾರಾಯಣಬಾವ ಅವರ ಮೇಲೆ ಕೋಪಗೊಂಡು, "ನಾನೇಕೆ ಕೊಡಬೇಕು ? ನಾನು ನಿಮಗೆ ಒಳ್ಳೆಯದಾಗುವುದನ್ನು ಹೇಳಿದಾಗ ಅದು ನಿಮ್ಮ ತಲೆಗೆ ಏರಲಿಲ್ಲ. ಯಾರದೋ ಚಾಡಿಮಾತು ಕೇಳಿ ನನ್ನ ಸಲಹೆಯನ್ನು ನಿರಾಕರಿಸಿಬಿಟ್ಟರಿ. ನಿಮಗೆ ಲಾಭದ್ದೊಂದು ಸೂಚನೆಕೊಟ್ಟ ಕೂಡಲೇ, ಯಾರ ಹತ್ತಿರವೂ ಕೇಳದೆ, ಗಾಳಿಯ ದಿಕ್ಕನ್ನೂ ಗಮನಿಸದೆ ನನ್ನ ಸೂಚನೆಯನ್ನು ಅವಸರದಿಂದ ನೆರವೇರಿಸಿ ಕೆಡುಕು ತಂದುಕೊಂಡಿರಿ. ಅನುಭವಿಸಿರಿ. ನಿಮ್ಮ ಮೂರ್ಖತನಕ್ಕೆ ನಾನು ಬಾಧ್ಯನಲ್ಲ" ಎಂದನು.

ಗ್ರಾಮಸ್ಥರು ನಾಚಿಕೆಯಿಂದ ತಲೆ ಬಗ್ಗಿಸಿಕೊಂಡು ಹೊರಟುಹೋದರು. ಆದರೆ ಖರ್ಚಿಲ್ಲದೆ ನಾರಾಯಣಬಾವನ ಕಾಡು ಒಳ್ಳೆಯ ಕೆಲಸಕ್ಕೆ ಸರಿಯಾಯಿತು. ಅಲ್ಲಿ ಅವನು ತೆಂಗಿನ ಸಸಿಗಳ ತೋಟ ಹಾಕಿಸಿದನು.



# ತಿರುಗಿಹೊಡೆದ ಯುಕ್ತಿ

ಎಲ್ಲೋ ಒಂದು ಮೂಲೆಯ ಕುಗ್ರಾಮದಲ್ಲಿ ಶರವಣನೆಂಬ ಪಿಸುಣಾರಿ ಇದ್ದ. ಅವನ ಮಗ ಭರಮ ನಗರದಲ್ಲಿ ಓದುತ್ತಿದ್ದ.

ಒಂದುಸಾರಿ ಅವನು ತನ್ನ ಹುಟ್ಟು ಹಬ್ಬದ ದಿನ ತಾಯಿಯನ್ನು ಸಂತೋಷ ಪಡಿಸಲು ಇನ್ನೂರು ರೂಪಾಯಿಯ ಪಟ್ಟೆ ಸೀರೆಯೊಂದನ್ನು ಕೊಂಡುಕೊಂಡು ಕಳುಹಿಸಿದ. ಆದರ ನಿಜವಾದ ಬೆಲೆ ತಿಳಿದರೆ ಫಿಸುಣಾರಿ ತಂದೆಗೆ ಎದೆನಿಂತು ಹೋದೀತೆಂದುಕೊಂಡು ಅದರ ಬೆಲೆ ನೂರು ರೂಪಾಯಿ ಎಂದು ತಿಳಿಸಿದ್ದ. ಅದೇ ತಪ್ಪಾಯಿತು.

ಎರಡು ದಿನಗಳ ಮೇಲೆ ತಂದೆಯಿಂದ ರಾಮನಿಗೆ ಕಾಗದ ಬಂದಿತು. ಅದರಲ್ಲಿ "ನೀನು ಕಳಿಸಿದ ಸೀರೆಯನ್ನು ಇಲ್ಲಿ ನೂರೈವತ್ತಕ್ಕೆ ಮಾರಿ ಲಾಭ ಗಳಿಸಿದೆ. ಅದನ್ನು ನೋಡಿದವರೆಲ್ಲರೂ ಮೆಚ್ಚಿದ್ದಾರೆ. ಇನ್ನೂ ಇಂತಹ ಹತ್ತು ಸೀರೆಗಳಿಗೆ ಗಿರಾಕಿಯಿದೆ, ಕಳುಹಿಸು. ಸೀರೆಗಳು ಅದೇ ರೀತಿಯದ್ದಾಗಿರಬೇಕು."

ಈ ಕಾಗದ ನೋಡಿ ಭರಮನಿಗೆ ಎದೆ ನಿಂತು ಹೋಗದ್ದು ಪುಣ್ಯ !





# ಚರಿತಾರ್ಥರು

ಒಂದಾನೊಂದು ಕಾಲದಲ್ಲಿ ಊರೊಳಗಿನ ವ್ಯವಹಾರಗಳು ರಾಜನವರೆಗೆ ಹೋಗದೆ ಪಂಚಾಯಿತಿಯ ಮೂಲಕ ಸರಿಯಾದ ನ್ಯಾಯವು ನೆಲೆಗೊಳ್ಳುವಂತೆ ನಡೆಯುತ್ತಿದ್ದುವು. ಅಂತಹ ಕಾಲದಲ್ಲಿ ಸೀತಾಪುರವೆಂಬ ಚಿಕ್ಕ ಗ್ರಾಮದಲ್ಲಿ ಗೋವಿಂದನೆಂಬ ಚಿಕ್ಕ ರೈತನಿದ್ದನು. ಒಂದು ದಿನ ಗೋವಿಂದನು ತನ್ನ ತಂದೆಯೊಂದಿಗೆ ಕೂಡಿ ತೋಟದಲ್ಲಿ ಕೆಲಸ ಮಾಡುತ್ತಿದ್ದನು. ಆಗ ಒಂದು ಮೇಕೆ ಬಂದು ತೋಟದೊಳಗಿನ ಸಸಿಗಳನ್ನು ಚರಚರ ಮೇಯತೊಡಗಿತು. ಅದನ್ನು ನೋಡಿ ಗೋವಿಂದನ ತಂದೆ ಒಂದು ಗುಂಡುಕಲ್ಲನ್ನೆತ್ತಿ ಆ ಮೇಕೆಯ ತಲೆಗೆ ಬೀಸಿ ಹೊಡೆಯಲು, ಅದು 'ಮೇ' ಎಂದು ಕೆಟ್ಟ ಸ್ವರದಿಂದ ಅರಚುತ್ತಾ ಬಿದ್ದು ಸತ್ತುಬಿಟ್ಟಿತು.

ಕೂಡಲೇ ಬೇಲಿಯ ಆಚೆಯ ಬದಿಯಿಂದ ಒಂದು ಕಲ್ಲು ರೊಪ್ಪನೆ ಬಂದು ಗೋವಿಂದನ ತಂದೆಯ ತಲೆಗೆ ಸಾಗಿತು. ಆ ಪೆಟ್ಟಿಗೆ ತಲೆಯೊಡೆದು ಆ ಮುದುಕ ಕೂಡಾ ಹಾ ಎಂದು ಬಿದ್ದು ಸತ್ತುಹೋದ. ಗೋವಿಂದನು ತೋಟದ ಹೊರಗೆ ಓಡಿಹೋಗಿ ಕುರಿ ಮತ್ತು ಮೇಕೆಯ ಮಂದೆಯನ್ನು ಹೊಡೆದುಕೊಂಡು ಹೋಗುತ್ತಿದ್ದ ಕುರುಬನನ್ನು ನೋಡಿದ. ಅವನ ಹೊರತು ಬೇರೆ ಯಾರೂ ಅಲ್ಲಿರಲಿಲ್ಲ. ಆದುದರಿಂದ ಗೋವಿಂದನು ಅವನನ್ನು ಹಿಡಿದುಕೊಂಡು ಹೋಗಿ ಊರಿನ ಹಿರಿಯರ ವಶಕ್ಕೆ ಕೊಟ್ಟು, ಅವನು ತನ್ನ ತಂದೆಯನ್ನು ಕಲ್ಲು ಹೊಡೆದು ಕೊಂದನೆಂದು ದೂರುತ್ತ ಮೊರೆಯಿಟ್ಟುಕೊಂಡನು.

ಆಗಿಂದಾಗಲೇ ಪಂಚಾಯಿತೀ ಸೇರಿತು. ಕೆಲವು ದೊಡ್ಡ ಮನುಷ್ಯರು ಗೋವಿಂದನು ಮಾಡಿದ ಆರೋಪಣೆಯನ್ನು ಕುರಿತು ಏನು ಹೇಳುವೆಯೆಂದು ಕುರುಬನನ್ನು ಕೇಳಿದರು. ಅದಕ್ಕೆ ಆ ಕುರುಬ ಹೀಗೆ ಹೇಳಿದನು :

"ಅಯ್ಯಾ, ನನ್ನ ಹೆಸರು ಗೋಪಾಲ. ನನ್ನ ಊರು ಇಲ್ಲಿಗೆ ಆರು ಹರದಾರಿ ದೂರದಲ್ಲಿದೆ. ಅಲ್ಲಿ ಈ ಸಾರಿ ಮಳೆ ಬಾರದ್ದರಿಂದ ಮಂದೆಯ ಮೇವಿಗೆ ಬರಗಾಲ ಬಂತು. ಆದುದರಿಂದ ನಾನು ನನ್ನ ಕುರಿ ಮೇಕೆಗಳನ್ನು ಮೇಯಿಸುತ್ತಾ ಹೀಗೆ ಬಂದೆ. ನನ್ನ ಮಂದೆಯಿಂದ ಒಂದು ಮೇಕೆ ತಪ್ಪಿಸಿಕೊಂಡು ಆ ತೋಟಕ್ಕೆ ಹೋಯಿತು. ಅಲ್ಲಿದ್ದ ಮುದುಕರು ಅದನ್ನು ಕಲ್ಲಿನಿಂದ ಹೊಡೆದು ಕೊಂದುಬಿಟ್ಟರು. ಆ

ಅನ್ವರ್

ಕೋಪದಲ್ಲಿ ನಾನೂ ಮೈಮರೆತು ಆ ಮುದುಕರ ತಲೆಗೆ ಕಲ್ಲಿನಿಂದ ಹೊಡೆದೆ. ಆ ಪೆಟ್ಟಿಗೆ ಅವರು ಕೂಡಾ ಸತ್ತರು. ಸತ್ಯವಾಗಿ ನಡೆದ ಸಂಗತಿ ಇದು. ತಾವೆಲ್ಲರೂ ಏನು ತೀರ್ಪು ಹೇಳಿದರೂ ಅದನ್ನು ನಾನು ಶಿರಸಾವಹಿಸುತ್ತೇನೆ."

ಅವನು ನಿಜ ಸಂಗತಿಯನ್ನೇ ಹೇಳಿದುದರಿಂದ ಎಲ್ಲರೂ ಬಹಳ ಸಂತೋಷಪಟ್ಟರು. ಆದರೆ ಈ ವಿಷಯದಲ್ಲಿ ಕಾನೂನು ಪ್ರಕಾರ ದಂಡನೆ ಕೊಡಬೇಕಾಗಿ ಬಂದುದರಿಂದ ಕುರುಬ ಗೋಪಾಲನಿಗೆ ಮರಣದಂಡನೆ ವಿಧಿಸಿದರು.

ಹೀಗಿದ್ದರೂ ಆದೇ ಕಾನೂನಿನ ಪ್ರಕಾರ ಗೋಪಾಲನಿಂದ ತಕ್ಕ ಪರಿಹಾರ ಪಡೆದು ಅವನನ್ನು ಕ್ಷಮಿಸಲು ಸಾಧ್ಯವಿತ್ತು. ಆದರೆ ಗೋವಿಂದನು ಅದನ್ನು ನಿರಾಕರಿಸಿಬಿಟ್ಟನು. ಆದುದರಿಂದ ಗೋಪಾಲನಿಗೆ ಮರಣದಂಡನೆಯೇ ಖಾಯಂ ಆಯಿತು.

ಗೋಪಾಲನು ಗ್ರಾಮದ ಹಿರಿಯರೊಂದಿಗೆ, "ಅಯ್ಯಾ, ಕರ್ಮಕ್ಕೆ ತಕ್ಕ ಫಲ ಅನುಭವಿಸಲೇಬೇಕು. ನನಗೆ ಹೀಗೆಯೇ ಅಂತ್ಯಕಾಲ ಬರೆದಿದ್ದರೆ ಯಾರೇನು ಮಾಡಬಲ್ಲರು? ನನ್ನದೊಂದು ಬಿನ್ನಹ. ನನಗೆ ಐದು ವರ್ಷ ವಯಸ್ಸಿನ ಒಬ್ಬ ತಮ್ಮನಿದ್ದಾನೆ. ನಮ್ಮ ತಂದೆ ಸಾಯುವಾಗ ತನ್ನ ಆಸ್ತಿಯನ್ನು ನಮ್ಮಿಬ್ಬರಿಗೆ ಹಂಚಿ, ಅವನನ್ನು ಪೋಷಿಸುವ ಭಾರದೊಂದಿಗೆ ಅವನ ಪಾಲಿನ ಧನವನ್ನು ಕೂಡಾ ನನ್ನ ವಶಕ್ಕೆ ಕೊಟ್ಟು ಕಣ್ಣು ಮುಚ್ಚಿದರು. ಆ ಧನವನ್ನು ನನ್ನ ಪಾಲಿನ ಧನದೊಂದಿಗೆ ಒಂದು ರಹಸ್ಯ ಪ್ರದೇಶದಲ್ಲಿ ಭೂಮಿಯಲ್ಲಿ ಅಡಗಿಸಿದ್ದೇನೆ. ಆ ವಿಷಯ ನನ್ನ ಹೊರತು ಮತ್ತಾರಿಗೂ ತಿಳಿಯದು. ನಾನು ಇಲ್ಲಿ ಮರಣ ದಂಡನೆಯಿಂದ ಸತ್ತುಹೋಗಿಬಿಟ್ಟರೆ ಆ ಧನವೆಲ್ಲಾ ಅಲ್ಲೇ ಭೂಮಿಯಲ್ಲಿ ಉಳಿದುಹೋಗುತ್ತೆ. ನನ್ನ ಸಣ್ಣ ತಮ್ಮ ಗತಿಯಿಲ್ಲದೆ ಸಾಯಬೇಕಾಗುತ್ತದೆ. ನನಗೆ ಮೂರು ದಿನಗಳ ವ್ಯವಧಿಕೊಟ್ಟರೆ ಆ ಧನವನ್ನೂ ನನ್ನ ತಮ್ಮನನ್ನೂ ಯಾರವಶಕ್ಕಾದರೂ ಒಪ್ಪಿಸಿಕೊಟ್ಟು ಅವನಿಗೆ ತಕ್ಕ ಏರ್ಪಾಡು ಮಾಡಿ ಬಂದುಬಿಡುತ್ತೇನೆ." ಎಂದನು.



"ಹಾಗೆ ಮಾಡಬೇಕಾದರೆ ನಿನಗೆ ಯಾರಾದರೂ ಜಾಮೀನು ಇರಬೇಕು" ಎಂದರು ಗ್ರಾಮದ ಹಿರಿಯರು.

ಅಲ್ಲಿ ಗೋಪಾಲನ ಪರಿಚಯದವರಾರೂ ಇರಲಿಲ್ಲ. ಗೋಪಾಲನು ಎಲ್ಲರ ಮುಖವನ್ನೂ ಪರೀಕ್ಷಿಸಿ ನೋಡಿ, ಠೀವಿಯಿಂದ ಕುಳಿತಿದ್ದ ಕೃಷ್ಣಯ್ಯನೆಂಬ ರೈತನನ್ನು ತೋರಿಸಿ "ಅವರು ನನಗಾಗಿ ಜಾಮೀನು ಇರುತ್ತಾರೆ" ಎಂದನು.

"ಆಗಲಿ, ಇರುತ್ತೇನೆ" ಎಂದು ಕೃಷ್ಣಯ್ಯನೂ ಒಪ್ಪಿದ. ಮೂರನೇದಿನ ಸಾಯಂಕಾಲದವರೆಗೂ ಗಡುವುಕೊಟ್ಟು ಗೋಪಾಲನನ್ನು ಹೋಗಲು ಬಿಟ್ಟರು. ಗೋಪಾಲನು ಅವಧಿಯೊಳಗೆ ತಪ್ಪದೆ ಬರುವೆನೆಂದು ಹೇಳಿ ತನ್ನ ಮಂದೆಯನ್ನು ಹೊಡೆದುಕೊಂಡು ಹೊರಟುಹೋದನು.

ಮೂರನೇದಿನ ಬೆಳಗಾಯಿತು, ಮಧ್ಯಾಹ್ನ ದಾಟಿತು. ಗೋಪಾಲನು ಬರಲಿಲ್ಲ. ಸಾಯಂಕಾಲವಾಗುತ್ತಬಂದರೂ ಅವನ ಪತ್ತೆ ಇಲ್ಲ.

"ಪಾಪ, ಮುಗ್ಧ ಸ್ವಭಾವದ ಕೃಷ್ಣಯ್ಯನವರು ತನ್ನ ಪ್ರಾಣಕ್ಕೆ ತಂದು ಕೊಂಡರಲ್ಲಾ!" ಎಂದು ಗ್ರಾಮಸ್ಥರು ಕಸಿವಿಸಿ ಗೊಳ್ಳತೊಡಗಿದರು. ಏಕೆಂದರೆ ಅಪರಾಧಿಯ ಶಿಕ್ಷೆಯನ್ನು ಜಾಮೀನುದಾರನು ಅನುಭವಿಸ ಬೇಕಾಗುತ್ತೆ.

ಸಾಯಂಕಾಲದಲ್ಲಿ ಈ ಸಂಗತಿಯನ್ನು ನಿರ್ಣಯಿಸಲಿಕ್ಕೆ ಪಂಚಾಯಿತೀ ಕೂಡಿತು. ಸೂರ್ಯನು ಮುಳುಗಲಿಕ್ಕೆ ಇನ್ನು ಒಂದುಗಳಿಗೆ ಇದೆಯೆನ್ನುವಾಗ ಗೋಪಾಲನು ಓಡುತ್ತಾ ಬೆವರಿ ತೇಕುತ್ತಾ ಬಂದು ಆ ಪಂಚಾಯಿತೀಯವರ ಮುಂದೆ ನಿಂತನು. ಅವನನ್ನು ನೋಡಿ ಎಲ್ಲರೂ, "ಭೇಷ್! ಗೋಪಾಲಾ!" ಎಂದು ಕೂಗಿದರು. "ಬಂದ! ಬಂದ!" ಎಂದು ಅನೇಕ ಕಂಠಗಳೂ ಮೊಳಗಿದುವು.

"ನನ್ನ ಮಾತು ತಪ್ಪಬಾರದಲ್ಲಾಂತ ಮೂರು ಹರದಾರಿ ಓಡುತ್ತಾ ಬರಬೇಕಾಯಿತು. ಅಬ್ಬ! ಗೆದ್ದೆನಪ್ಪಾ, ದೇವರೆ! ಮಾತು ಉಳಿಯಿತು!" ಎಂದನು ಗೋಪಾಲ.

"ಮಾನವತೆಯನ್ನು ನಿರೂಪಿಸಲು ನಾನು ಜಾಮೀನು ನಿಂತೆ" ಎಂದ ಕೃಷ್ಣಯ್ಯ. ಆಗ ಗೋವಿಂದನು "ಹೌದು. ಗೋಪಾಲನು ಮಾತು ಉಳಿಸಿಕೊಂಡ. ಕೃಷ್ಣಯ್ಯ ಮಾನವತ್ವ ಉಳಿಸಿಕೊಂಡರು. ನಾನು ದಯೆಯುಳ್ಳವನೆಂದು ನಿರೂಪಿಸಲು ಗೋಪಾಲನನ್ನು ಕ್ಷಮಿಸುತ್ತೇನೆ." ಎಂದನು.

ಪಂಚಾಯಿತಿಯವರು ಮೂವರನ್ನೂ ಮೆಚ್ಚಿಕೊಂಡರು. ಆ ದಿನ ಗೋವಿಂದನೇ ಕುರುಬ ಗೋಪಾಲನನ್ನು ತನ್ನ ಅತಿಥಿಯಾಗಿ ಕರೆದೊಯ್ದು, ಮಾರನೇ ದಿನ ಅವನನ್ನು ಸಾದರದಿಂದ ಕಳುಹಿಸಿಕೊಟ್ಟನು.





# ಪಂಚಾಯಿತಿಯ ಫಲ

ಹಿಂದೆ ಒಂದು ಊರಿನಲ್ಲಿ ಶಿವರಾಮನೆಂಬ ಯುವಕನಿದ್ದನು. ಅವನಿಗೆ ಬುದ್ಧಿ ಹೇಳತಕ್ಕಂಥಹ ಹಿರಿಯರು ಯಾರೂ ಇರಲಿಲ್ಲ. ತನಗಿರುವ ಸ್ವಲ್ಪ ಆಸ್ತಿಯನ್ನು ಜಾಗರೂಕತೆಯಿಂದ ನೋಡಿಕೊಳ್ಳುತ್ತ, ಬಹಳ ಮಿತವ್ಯಯದಿಂದ ಕಾಲಕ್ಷೇಪ ಮಾಡುತ್ತಿದ್ದನು. ಅವನು ಬುದ್ಧಿವಂತನೆಂದುಕೊಂಡು ಅನೇಕರು ಅವನಿಗೆ ಹುಡುಗಿ ಕೊಡುತ್ತೇವೆಂದು ಮುಂದೆ ಬಂದರು. ಹಾಗೆ ಬಂದವರಲ್ಲಿ ಪಕ್ಕದ ಊರಿನ ಶ್ಯಾನುಭಾಗರೂ ಒಬ್ಬರು. ಅವರ ಮಗಳು ಕಣ್ಣಿಗೆ ಚೆನ್ನಾಗಿ ಕಂಡುದರಿಂದ ಶಿವರಾಮನು ಅವಳನ್ನು ಮದುವೆಯಾದ.

ಹೆಂಡತಿ ಮನೆಗೆ ಬಂದ ಮೂರು ತಿಂಗಳೊಳಗೇ ಶಿವರಾಮನಿಗೆ ಈ ಹುಡುಗಿಯನ್ನು ಏಕೆ ಮಾಡಿಕೊಂಡೆನೋ ಅನಿಸಿತು. ಅವಳ ಮೇಲೆ ಬೇಸರವೂ ಕೋಪವೂ ಪದೇ ಪದೇ ಬರತೊಡಗಿತು. ಹೊರಗಿನ ಸೌಂದರ್ಯ ನೋಡಿ ಮೋಸ ಹೋದೆನೆಂದು ತೋರತೊಡಗಿತು. ಇದಕ್ಕೆ ಕಾರಣವೇನೆಂದರೆ, ಪಾರ್ವತಿ ಖರ್ಚಿನ ವಿಷಯದಲ್ಲಿ ದುಬಾರಿಯವಳು. ಮಿತವ್ಯಯದ ಅಭ್ಯಾಸವಿಲ್ಲದವಳು. ಅವಳು ಬೆಳೆದುಬಂದ ಮನೆ ಅಂಥಾದ್ದು. ಹೆಂಡತಿ ಬಂದ ಮೂರು ತಿಂಗಳೊಳಗೆ ಆದ ಖರ್ಚಿನ ಲೆಕ್ಕ ನೋಡಿಕೊಂಡಾಗ ಶಿವರಾಮನಿಗೆ ಪಿತ್ಥ ಕೆದರಿಹೋಯಿತು. ಇನ್ನೂ ಹೀಗೆಯೇ ಬಿಟ್ಟರೆ ಕೈಗೆ ಗೆರಟೆ ಬರುವುದೇ ನಿಜ!

ಪಾರ್ವತಿ ಕೂಡಾ ತನ್ನ ಗಂಡನ ಧೋರಣೆಯನ್ನು ಸಹಿಸಲಾರದೆ ಹೋದಳು. ಒಳ್ಳೆಯದಾಗಿ ತಿಂದುಂಡ ಮನೆಯಿಂದ ಬಂದವಳಾದುದರಿಂದ ಅಡಿಗೇ ಪದಾರ್ಥಗಳನ್ನು ಸ್ವಲ್ಪ ಚೆನ್ನಾಗಿಯೇ ಮಾಡುತ್ತಿದ್ದಳು. ಗಂಡನ ಗೊಣಗಾಟ ನೋಡಿ ತನ್ನ ಅಭ್ಯಾಸವನ್ನು ನಿಗ್ರಹಿಸಿಕೊಳ್ಳಲು ಪ್ರಯತ್ನ ಮಾಡಿದಳು ಪಾಪ. ಆದರೂ ಮನೆಯಲ್ಲಿಯ ಕೊರತೆಗಳನ್ನು ಕಂಡಾಗ ಬೇಕಾದುವನ್ನು ಕೈಸಡಿಲುಬಿಟ್ಟೇ ಕೊಂಡುಕೊಳ್ಳುತ್ತಿದ್ದಳು. ಬೀದಿಯಲ್ಲಿ ಮಾರಿಕೊಂಡುಬಂದ ಸೀರೆಯುವನನ್ನು ಕರೆದು ತನಗೆ ಹಿಡಿಸಿದ ಎರಡು ಸೀರೆಗಳನ್ನು ಕೊಂಡುಕೊಂಡುಬಿಟ್ಟಳು. ಅದು ದೊಡ್ಡ ಅನರ್ಥಕ್ಕೇ ಕಾರಣವಾಯಿತು. ಶಿವರಾಮನು ಕೆಂಡಕ್ಕೆ ಹಾಕಿದ ಗುಗ್ಗುಳದಂತಾದನು. ಇಬ್ಬರ ನಡುವೆ ಸೆಣಸಾಟ ಜೋರಾಯಿತು.

ಕಡೆಗೆ ಒಂದು ದಿನ ಶಿವರಾಮನು "ಇನ್ನು ತಾಳಲಾರೆ ನಿನ್ನ ಭಾರ. ಹೊರಡು, ಎರಡರಲ್ಲೊಂದು

ಜಿ. ನಿರ್ಮಲ

ನಿರ್ಣಯಿಸಿಬಿಡಬೇಕು." ಎಂದು ಹೇಳಿ ಅವಳನ್ನು ಕರೆದುಕೊಂಡು ಅವಳ ತೌರುಮನೆಗೆ ಹೋದನು. ಅಲ್ಲಿ ಅತ್ತೆ ಮಾವಂದಿರೊಂದಿಗೆ, "ಇಗೊಳ್ಳಿ ನಿಮ್ಮ ಮಗಳು. ಇಷ್ಟೊಂದು ದುಬಾರಿ ಖರ್ಚಿನವಳೊಂದಿಗೆ ಹೇಣಾಡಿಕೊಂಡಿರಲು ನನ್ನಿಂದಾಗದು. ಶಕ್ಯ ಹಾಗೆ ಇವಳಿಗೆ ಬುದ್ಧಿ ಹೇಳಿ ದಾರಿಗೆ ತರುವಿರೋ, ಅಥವಾ ಅಂತ್ಯದವರೆಗೂ ನಿಮ್ಮ ಮಗಳನ್ನು ನಿಮ್ಮ ಮನೆಯಲ್ಲಿಯೇ ಇಟ್ಟುಕೊಳ್ಳುವಿರೋ ನೀವೇ ನಿರ್ಣಯಿಸಿ ಹೇಳಿಬಿಡಿ" ಎಂದನು.

"ಚಿಂತಿಸಬೇಡಪ್ಪ. ಮಗಳಿಗೆ ಬುದ್ಧಿ ಹೇಳಬೇಕಾದ ಬಾಧ್ಯತೆ ನಮ್ಮದೇ. ನೀನು ಸಮಾಧಾನದಿಂದಿರು, ನಾವೆಲ್ಲಾ ಸರಿಮಾಡುತ್ತೇವೆ" ಎಂದು ಪಾರ್ವತಿಯ ತಾಯಿತಂದೆಯರು ಶಿವರಾಮನಿಗೆ ಹೇಳಿದರು. ಮಗಳ ಸಂಸಾರ ಎಲ್ಲಿ ಕೆಟ್ಟುಹೋಗುವುದೋ ಎಂಬ ಭಯ ಅವರಿಗುಂಟಾಗಿತ್ತು.

ಗ್ರಾಮದಲ್ಲೇನಾದರೂ ಕುಟುಂಬದೊಳಗೆ ಕಲಹ ಬಂದುಬಿಟ್ಟರೆ ನಾಲ್ಕು ಮಂದಿ ದೊಡ್ಡ ಮನುಷ್ಯರು ಕೂಡಿ ಪಂಚಾಯಿತಿ ಮಾಡಿ ತಮಗೆ ತೋರಿದಂತೆ ತೀರ್ಮಾನ ಹೇಳುವ ರೂಢಿಯಿತ್ತು.

ಆದರಂತೆ ಪಾರ್ವತಿಯ ತಾಯಿ ಅಕ್ಕಪಕ್ಕ ನೆರೆಹೊರೆ ಮನೆಗಳಲ್ಲಿರುವ ಅಮ್ಮ ಅಕ್ಕ ದೊಡ್ಡಮ್ಮಂದಿರಬಳಿಗೆ ಹೋಗಿ, ನಡೆದ ಸಂಗತಿ ಹೇಳಿ, ತನ್ನ ಮಗಳ ಸಂಸಾರವನ್ನು ಸರಿಮಾಡಿ ನಿಲ್ಲಿಸುವ ಬಾಧ್ಯತೆ ಅವರ ಮೇಲಿರುವುದೆಂಬಂತೆ ಮಾತಾಡಿದಳು. ಇಂತಹ-ಕಾಲಕ್ಷೇಪಕ್ಕಿಂತಲೂ ಒಳ್ಳೆಯದು ಅವರಿಗೆ ಬೇರೇನಿದೆ? ಅವರು ಇದ್ದಬಿದ್ದ ಕೆಲಸಗಳನ್ನು ಅಲ್ಲಲ್ಲೇ ಹಾಕಿ, ಪಾರ್ವತಿಯ ತಾಯಿಯೊಂದಿಗೆ ಬಂದರು

ಅದೇ ವಿಧವಾಗಿ ಶ್ಯಾನುಭಾಗರು ಕೂಡಾ ಊರೊಳಗಿನ ನಾಲ್ಕು ಮಂದಿ ದೊಡ್ಡ ಮನುಷ್ಯರನ್ನೂ ಕರೆದುಕೊಂಡು ಬಂದರು.

ಚಾವಡಿಯಲ್ಲಿ ಒಂದು ಬದಿಯಲ್ಲಿ ಗಂಡುಸರೂ, ಇನ್ನೊಂದು ಬದಿಯಲ್ಲಿ ಹೆಂಗುಸರೂ ಕುಳಿತುಕೊಂಡರು. ಕೋಪದಿಂದ ಗುಣುಗುಟ್ಟುತ್ತ ಪಾರ್ವತಿಯೂ ಒಂದು ಮೂಲೆಯಲ್ಲಿ ಕುಳಿತಳು.



ಶಿವರಾಮನು ತನಗೆ ಪಾರ್ವತಿಯನ್ನು ಕುರಿತು ಉಂಟಾಗಿರುವ ಆಕ್ಷೇಪಣೆಯನ್ನು ಸ್ಪಷ್ಟವಾಗಿ ಎಲ್ಲರಿಗೂ ವಿವರಿಸಿ ಹೇಳಿದನು.

ಆ ಮೇಲೆ ಹೆಂಗುಸರಲ್ಲಿ ಹಿರಿಯ ಮುತ್ತೈದೆಯೊಬ್ಬಳು ಪಾರ್ವತಿಯನ್ನು ನೋಡಿ, "ನೋಡಮ್ಮಾ ಪಾರ್ವತೀ, ಗಂಡನೆಂದರೆ ಹೀಗೆ ಅಲಕ್ಷ್ಯಮಾಡಿಕೊಂಡಿರಬಾರದು. ಅವನಾದರೂ ಏನು ತಪ್ಪು ಹೇಳಿದ ? ಮಿತವಾಗಿ ಖರ್ಚು ಮಾಡುತ್ತ ಸಂಸಾರ ನಡೆಸಬೇಕು ಅನ್ನುತ್ತಾನೆ. ಇಷ್ಟೊಂದು ಸಣ್ಣ ವಿಷಯಕ್ಕೆ ಇಷ್ಟು ದೊಡ್ಡ ಗಲಾಟೆ ಯಾಕೆ ಹೇಳು ? 'ಬೈದರೂ ಹೊಡೆದರೂ ಹೆಣ್ಣಾದವಳಿಗೆ ಗಂಡನೇ ದೇವರು !" ಎಂದಳು.

ಇನ್ನೊಬ್ಬಳು ಆ ಮಾತನ್ನೇ ಹಿಡಿದು, "ಹೌದಮ್ಮಾ. ದಾಂಪತ್ಯವೆಂದರೆ ನೂರು ವರ್ಷದ ಫಸಲೂ ಅಂತಾರೇ. ಅದನ್ನು ಕಸಕ್ಕಿಂತ ಕಡೆಯಾಗಿ ನೋಡಿ ಸಂಸಾರ ಕೆಡಿಸಿಕೋಬಾರದಮ್ಮ. ಚಿಕ್ಕ ಹುಡುಗಿ, ಏನೂ ಗೊತ್ತಿಲ್ಲ ಪಾಪ. ನಾವೆಲ್ಲಾ ಎಷ್ಟು ವರ್ಷದಿಂದ ಸಂಸಾರ ಮಾಡ್ತಾ ಇದ್ದೇವೆ ? ಎಂದಾದರೂ ತಕರಾರು ಬಂದದ್ದುಂಟಾ ? ಬೇಡಮ್ಮ, ಗಂಡ ಹೇಳಿದ ಹಾಗೆ ಕೇಳು" ಎಂದಳು.

ಕೂಡಲೇ ಮೂರನೆಯವಳೊಬ್ಬಳು "ಕಟ್ಟಿಕೊಂಡವಳಿಗೆ ಮುಕ್ಕಿದ್ದೇ ದಕ್ಕಿತಂತೆ ! ದೊಡ್ಡ ದೊಡ್ಡ ಆಶೆಗಳನ್ನೆಲ್ಲ ಇಟ್ಟುಕೋ ಬಾರದಮ್ಮ. ಗಂಡನಿಗೆ ಆಗೋ ಹಾಗೆ ಮಾಡಿದ್ದಿಷ್ಟು ತಿಂದುಕೊಂಡು ಅದೇ ಮಹಾ ಭಾಗ್ಯ ಅಂದುಕೊಂಡಿರಬೇಕು ಹೆಣ್ಣಾದೋಳು. ಹೆಂಗಸರಿಗೆ ದುರಾಶೆ ಇರಲೇಬಾರದಮ್ಮಾ ? ಹೆಣ್ಣೊಂತಾದ ಮೇಲೆ ಗಂಡನಿಗೆ ಬಗ್ಗಿಕೊಂಡೇ ಇರಬೇಕು. ಅದೇ ಸಂತೋಷ ಅವಳಿಗೆ ಗೊತ್ತಾ ?" ಎಂದಳು.

ಅಲ್ಲಿರುವ ಗಂಡಸರಲ್ಲಿ ಒಬ್ಬರೂ, ಕಡೇ ಪಕ್ಷ ತನ್ನ ತಂದೆ ಕೂಡಾ ಮಾತಾಡದೆ ಕುಳಿತಿರುವುದನ್ನು ಪಾರ್ವತಿ ಗಮನಿಸಿದಳು. ಹೆಂಗಸರೇ ಹಿರಿತನವನ್ನು ಹೊತ್ತುಕೊಂಡು ತನ್ನಿಂದ ಎಂತಹುದೋ ಭಾರಿ ಅಪರಾಧವಾದ ಹಾಗೆ ಮಾತಾಡುವುದನ್ನು ನೋಡಿ



ಅವಳಿಗೆ ತುಂಬಾ ಸಿಟ್ಟು ಬಂತು. ಆ ಸ್ಥಿತಿಯಲ್ಲಿ ನಾಲ್ಕನೇ ಹೆಂಗಸೊಬ್ಬಳು ಏನೋ ಹೇಳಬೇಕೆಂದು ನೋಡುವಾಗ ಪಾರ್ವತಿ ತಟ್ಟನೆ ತಲೆಯೆತ್ತಿ, "ಇನ್ನು ಸಾಕು ಮಾಡಿ! ನನಗೆ ಬುದ್ಧಿ ಹೇಳುವ ಅರ್ಹತೆ ನಿಮಗೆ ಯಾರಿಗೂ ಇಲ್ಲ. ನಿಮ್ಮನ್ನೆಲ್ಲ ಚಿಕ್ಕಂದಿನಿಂದಲೂ ನಾನು ಬಲ್ಲೆ. ನೀವೆಲ್ಲ ನಿಮ್ಮ ನಿಮ್ಮ ಗಂಡಂದಿರು ಹೇಳುವ ಮಾತುಗಳನ್ನು ಎಷ್ಟರ ಮಟ್ಟಿಗೆ ಕೇಳುತ್ತೀರಿ ಅಂತ ನನಗೆ ಗೊತ್ತು. ಗಂಡನಿಗೆ ಗೊತ್ತಾಗದ ಹಾಗೆ ಅಕ್ಕಿಬೇಳೆಗಳನ್ನು ಹಿಂದಿನ ಬಾಗಿಲಿನಲ್ಲಿ ಮಾರಿ ನಗಮಾಡಿಸಿಕೊಂಡು, ತೌರು ಮನೆಯವರು ಹಾಕಿದರೂ ಅಂತ ಗಂಡನ ಹತ್ತಿರ ಹೇಳಿ ಮೋಸಮಾಡಿದವರು ಒಬ್ಬರು. ಗಂಡ ಗದ್ದೆಗೆ ಹೊರಟುಹೋದ ಕೂಡಲೇ ಊರೆಲ್ಲಾ ಹಿರಿತನ ಮಾಡಿದವರು ಇನ್ನೊಬ್ಬರು. ತೌರುಮನೆಗೆ ಗುಟ್ಟಾಗಿ ಗಂಡನ ಮನೆಯ ಗಂಟು ಸಾಗಿಸಿದವರು ಮತ್ತೊಬ್ಬರು. ಒಬ್ಬರಿಗೆ ಬುದ್ಧಿ ಹೇಳುವ ಮೊದಲು ನಾವು ಅದಕ್ಕೆ ಅರ್ಹರು ಹೌದೋ ಅಲ್ಲವೋ ಅಂತ ಆತ್ಮವಿಮರ್ಶೆ ಮಾಡಿಕೊಂಡು ಮತ್ತೆ ಹೇಳಬೇಕು. ಆದರೆ ನಿಮ್ಮೆಲ್ಲರ ಅದೃಷ್ಟ ಏನೆಂದರೆ, ನಿಮ್ಮ ನಿಮ್ಮ ಮೋಸದ ವಿಷಯಗಳೆಲ್ಲ ನಿಮ್ಮ ಗಂಡಸರಿಗೆ ಗೊತ್ತಿದ್ದೂ ಕೂಡಾ ಶಾಂತವಾಗಿ ತಾಳಿಕೊಂಡು ಸುಮ್ಮನಿದ್ದಾರೆ. ಅದಕ್ಕಾಗಿ ಅವರನ್ನು ಮೆಚ್ಚಿಕೊಳ್ಳಬೇಕು. ನನ್ನ ಗಂಡ ಹಾಗೆ ಮನಸ್ಸಿನಲ್ಲಿಟ್ಟುಕೊಳ್ಳಲಿಲ್ಲ. ಸಾಕು ಬಿಡಿ. ನನಗೆ ಬುದ್ಧಿ ಹೇಳಲಿಕ್ಕೆ ಬಂದಿರಿ! ಇದ್ದ ಕೆಲಸಬಿಟ್ಟು ಬಂದಿದ್ದೀರಿ. ಇನ್ನು ದಯಮಾಡಿ ಬಿಡಿ." ಎಂದಳು.

ಅದುವರೆಗೆ ಬಾಯಿಮುಚ್ಚಿಕೊಂಡು ಕೇಳುತ್ತಾ ಇದ್ದ ಶಿವರಾಮನಿಗೆ ತಲೆ ತಿರಿಗಿತು. ಪ್ರಪಂಚದಲ್ಲಿ ಇಂತಹ ಮಹಾ ಮಹಾ ತಾಯಿಯರು ಕೂಡಾ ಇದ್ದಾರೋ ಎಂದುಕೊಂಡು ಅಲ್ಲಿರುವ ಗಂಡಸರ ಕಡೆಗೆ ನೋಡಿದ. ಪಾರ್ವತಿಯ ಮಾತುಗಳನ್ನು ಅವರು ಅಮೋದಿಸಿದಂತೆಯೇ ತೋರಿತು. ಅವರೊಂದಿಗೆ ತನ್ನನ್ನು ಹೋಲಿಸಿಕೊಂಡಾಗ ತಾನು ತುಂಬಾ ಅದೃಷ್ಟವಂತನೆನಿಸಿತು. ಅವರ ಹೆಂಡಂದಿರಿಗಿಂತ ತನ್ನ ಹೆಂಡತಿ ಲಕ್ಷಪಾಲಿಗೆ ಹೆಚ್ಚಿನವಳು.

ಪಂಚಾಯಿತಿಗೆ ಬಂದವರೆಲ್ಲ ಮಾತಾಡದೆ ಹೊರಟುಹೋದರು. ಅದರಿಂದ ಯಾವ ಫಲವೂ ಉಂಟಾಗಲಿಲ್ಲ. ಆದರೆ ಶಿವರಾಮನ ಸಮಸ್ಯೆ ತೀರಿತ್ತು. ಮನಸ್ಸು ಪ್ರಸನ್ನವಾಗಿತ್ತು. ಅವನು ಆ ಹೊತ್ತಿನಲ್ಲಿಯೇ ಪಾರ್ವತಿಯನ್ನು ತನ್ನೊಂದಿಗೆ ಕರೆದುಕೊಂಡು ಮನೆಗೆ ಹೊರಟನು. ಆಮೇಲೆ ದಂಪತಿಗಳ ಮಧ್ಯೆ ಯಾವ ಬಗೆಯ ತಕರಾರೂ ನಡೆಯಲಿಲ್ಲ. ಅವಳು ಮಾಡುವ ಖರ್ಚುಗಳೆಲ್ಲ ಅಗತ್ಯವಾದುದೆಂದೇ ಅವನಿಗೂ ತೋರಿತು.





# ಬೀಗುವರೋಗ

ಅನೇಕ ವರ್ಷಗಳ ಹಿಂದೆ ಒಂದು ಗ್ರಾಮದಲ್ಲಿ ಸೋಮವರ್ಮನೆಂಬ ಒಬ್ಬನಿದ್ದ. ಅವನಿಗೆ ತಂದೆ ತಾತಂದಿರು ಸಂಪಾದಿಸಿಟ್ಟ ಆಸ್ತಿ ಹೊಟ್ಟೆ ತುಂಬುವಷ್ಟಿತ್ತು. ಆದುದರಿಂದ ಅವನೇನೂ ಕಷ್ಟ ಪಡದೆ ತಿಂದುಂಡುಕೊಂಡಿದ್ದ. ಅವನಿಗೆ ಮೂಗಿನ ಮೇಲೆಯೇ ಕೋಪವಿದ್ದರೂ ತನ್ನ ಹೊಗಳಿಕೆಯನ್ನು ಕೇಳಿದರೆ ಉಬ್ಬಿಹೋಗುತ್ತಾನೆ.

ಸೋಮವರ್ಮನ ನೆರೆಯಲ್ಲಿರುವ ಮುದುಕನೊಬ್ಬ ಆಗಾಗ ಸೋಮವರ್ಮನ ಬಳಿಗೆ ಬಂದು ಕೈಗಡ ಕೇಳಿಕೊಂಡಿದ್ದ. ಆ ಸಾಲ ಮುಗಿಯುವಾಗಲೇ ಮುದುಕನ ಹೆಂಡತಿ ಬಂದು, ಸೋಮವರ್ಮನ ಹೊಗಳಿಕೆಗೆ ಉಬ್ಬುವ ಗುಣವನ್ನು ತಿಳಿದು, ಆವನನ್ನು ಅಷ್ಟು ಹೊಗಳಿ, ಇನ್ನಿಷ್ಟು ಕೈಸಾಲ ತೆಗೆದುಕೊಂಡು ಹೋಗುತ್ತಿದ್ದಳು.

"ಆದಕ್ಕೇನು ಬಿಡಪ್ಪಾ. ಆದೂ ಇದೂ ಕೂಡಿಸಿ ಬರುವ ತಿಂಗಳು ಕೊಟ್ಟು ಬಿಡುತ್ತೇನೆ. ನಿನ್ನ ಮನಸ್ಸು ಬೆಣ್ಣೆಯ ಹಾಗೆ ಅಂತ ಗೊತ್ತಿದೆಯಪ್ಪ. ಯಾರಿದ್ದಾರೆ ನಿನ್ನ ಹಾಗೆ? ಎಲ್ಲರೂ ಕಲ್ಲು ಮನಸ್ಸಿನವರೇ. ಆದ್ದರಿಂದಲೇ ನಿನ್ನ ಹತ್ತಿರ ಪ್ರಾರ್ಥಿಸಿಕೊಳ್ಳಬೇಕಾದ್ದು ನಮ್ಮ ಧರ್ಮ. ನಿನ್ನಂತಹ ಕನಿಕರದ ಎದೆ ಬೇರೆ ಯಾವ ಗಂಡಸರಿಗಿದೆ! ನಿನ್ನ ತಂದೆ ತಾಯಿ ಪುಣ್ಯಮಾಡಿ ನಿನ್ನನ್ನು ಹಡೆದಿದ್ದಾರಪ್ಪಾ" ಎಂದು ಮುದುಕಿ ಹೇಳಿದಾಗ ಸೋಮವರ್ಮ ಇನ್ನಿಷ್ಟು ಉಬ್ಬಿ, ಕೇಳಿದಷ್ಟು ಕೊಡುತ್ತಿದ್ದ.

ಸೋಮವರ್ಮನಲ್ಲಿದ್ದ ಈ ಬಲಹೀನತೆಯನ್ನು ನೋಡುತ್ತಾ ನೋಡುತ್ತಾ ಅವನ ಹೆಂಡತಿಗೆ ಬಹಳ ಬೇಸರವಾಗುತ್ತಿತ್ತು. ಕೋಪ ಬರುತ್ತಿತ್ತು. ಹೀಗೆಯೇ ತಿಂಗಳು ತಿಂಗಳೂ ನಡೆಯುತ್ತಿದ್ದರೆ ಏನು ಗತಿ? ಸಾಲ ಮುಗಿಯುವುದಾದರೂ ಉಂಟೇ? ಮುದುಕನಿಗೆ ಏನೋ ಖಾಯಿಲೆ ಕಸಾಲೆ ಅಂತಲೂ ಎದುರು ನೋಡದ ಹಾಗೆ ಏನೋ ಖರ್ಚು ಬಂದಿತೆಂತಲೂ ಆ ಮುದುಕಿ ಬಂದು ಹೊಸ ಹೊಸ ಕೈ ಸಾಲ ಪಡೆದುಕೊಂಡು ಹೋಗುತ್ತಲೇ ಇದ್ದಾಳೆ. ಇದನ್ನು ತಪ್ಪಿಸಲಿಕ್ಕೆ ಉಪಾಯ ಗೊತ್ತಾಗದೆ ಅವನ ಹೆಂಡತಿ ತೊಳಲ ತೊಡಗಿದಳು.

ಹೀಗಿರುವಾಗ ಒಂದು ದಿನ ಸೋಮವರ್ಮನ ಸೋದರಮಾವನು ಅಲ್ಲಿಗೆ ಬಂದ. ಆ ಸಮಯದಲ್ಲಿ ಸೋಮವರ್ಮ ಮನೆಯಲ್ಲಿರಲಿಲ್ಲ. ಆದುದರಿಂದ

ಎಂ. ವೆಂಕಟಕೃಷ್ಣ

ಅವನ ಹೆಂಡತಿ ಆತನೊಂದಿಗೆ ತನ್ನ ಗಂಡನಿಗಿರುವ ಮುಖಸ್ತುತಿಗೆ ಬೀಗುವ ರೋಗವನ್ನು ಕುರಿತು ಎಲ್ಲಾ ಹೇಳಿ ಹಗುರ ಮಾಡಿಕೊಂಡಳು.

ಆ ದಿನ ರಾತ್ರಿ ಊಟವೆಲ್ಲಾ ಆಗಿ ಕೆಲಸಗಳೆಲ್ಲ ಮುಗಿದ ಮೇಲೆ ಸೋಮವರ್ಮನ ಸೋದರಮಾವ ಅವನನ್ನೂ ಆವನ ಹೆಂಡತಿಯನ್ನೂ ಹತ್ತಿರ ಕೂಡಿಸಿ ಕೊಂಡು, "ನಮ್ಮ ಸೋಮವರ್ಮನನ್ನು ನೋಡಿದರೆ ನನಗೆ ತುಂಬಾ ಸಂತೋಷವೆನಿಸುತ್ತದೆ. ಇವನು ತಂದೆ ತಾತಂದಿರು ಸಂಪಾದಿಸಿಟ್ಟ ಆಸ್ತಿಯನ್ನು ಬೂದಿ ಮಾಡದೆ ತುಂಬ ಮಿತವ್ಯಯದಲ್ಲಿ ಸಾಗಿಸಿಕೊಂಡು ಬರುತ್ತಿದ್ದಾನೆ. ಇವನಷ್ಟೇ ವಯಸ್ಸಿನ ನಮ್ಮ ದೊಡ್ಡಪ್ಪನ ಮಗ ಆಸ್ತಿಯನ್ನೆಲ್ಲಾ ಸಾಲಗಾರರಿಗೆ ಧಾರೆಯೆರೆದುಬಿಟ್ಟ ಗೊತ್ತಾ?" ಎಂದ.

ಸೋಮವರ್ಮನ ಹೆಂಡತಿ, "ಇವರಿಗೂ ಸಾಲ ಕೊಡುವ ಅಭ್ಯಾಸ ಉಂಟೊ ಅಣ್ಣಿ—" ಎಂದು ಪಕ್ಕದ ಮನೆಯ ವೃದ್ಧದಂಪತಿಗಳು ಆಗಾಗ ಕೈ ಸಾಲ ತೆಗೆದುಕೊಂಡು ಹೋಗುವ ಸಂಗತಿಯನ್ನು ಹೇಳಿ ದಳು, ಆಗಲೇ ಹೊಸದಾಗಿ ಹೇಳುವಂತೆ.

ಅದನ್ನು ಕೇಳಿ ಸೋದರಮಾವ ಗಹಗಹಿಸಿ ನಕ್ಕು, ಸೋಮವರ್ಮನ ಭುಜತಟ್ಟುತ್ತ, "ತಪ್ಪಮ್ಮಾ. ನಿನಗೆ ನಮ್ಮ ಈ ಹುಡುಗನ ಗುಣ ಗೊತ್ತಿಲ್ಲ. ಇವನು ಯಾವ ಕೆಲಸ ಮಾಡಿದರೂ ತುಂಬಾ ಮುಂದಾ ಲೋಚನೆಯಿಂದ ಮಾಡುತ್ತಾನೆ. ನಿಮ್ಮ ಮದುವೆ ಯಾದ ಶುಭದಿನ ಬರುವ ತಿಂಗಳಿನಲ್ಲಿ ತಾನೇ? ನಿನ ಗೇನಾದರೂ ನಗ ಮಾಡಿಸುವ ಉದ್ದೇಶದಿಂದಲೇ ಆ ಸಾಲ ವಸೂಲು ಮಾಡದೆ ಹಾಗೇ ಬಿಟ್ಟಿರ ಬಹುದು. ವಸೂಲು ಮಾಡಿಬಿಟ್ಟಿದ್ದರೆ ಇಷ್ಟರಲ್ಲಿ ಎಲ್ಲಾ ಖರ್ಚೇ ಆಗುತ್ತಿತ್ತಷ್ಟೆ?" ಎಂದನು.

"ಹೌದು ಮಾವಯ್ಯಾ. ಇವಳಿಗೆ ಒಂದು ಜತೆ ಬಳೆ ಮಾಡಿಸುವಾ ಅಂತಲೇ" ಎಂದ ಸೋಮ ವರ್ಮ. "ಆದಕ್ಕೆ ಸರಿಯಾಗಿ ಅವರು ತಗೊಂಡ ಸಾಲಾ ಪೂರಾ ಕೊಟ್ಟರೆ ತಾನೇ?" ಎಂದಳು ಸೋಮವರ್ಮನ ಹೆಂಡತಿ.

"ಹಾಗೇಕೆ ಸಂದೇಹ ಪಡುತ್ತೀಯಮ್ಮಾ! ಬಡ್ಡಿ ಯೊಂದಿಗೆ ವಸೂಲು ಮಾಡುತ್ತಾನೆ. ನಾಳೆ ಇಷ್ಟು ಹೊತ್ತಿಗೆ ವಸೂಲಾಗದಿದ್ದರೆ ಮತ್ತೆ ಕೇಳು" ಎಂದು ಸೋಮವರ್ಮನನ್ನು ಆ ಸೋದರಮಾವ ಉಬ್ಬಿಸಿದ.

ಆದರಿಂದ ಹುರುಪುಗೊಂಡ ಸೋಮವರ್ಮ ಆ ಮುದುಕರ ಹತ್ತಿರ ಹೋಗಿ ಉಳಿದ ಸಾಲವನ್ನೆಲ್ಲಾ ಚುಕ್ತಾ ತೀರಿಸುವಿರಾ ಸಾಯುವಿರಾ ಎಂಬ ಹಟದಲ್ಲಿ ಅವರ ಕುತ್ತಿಗೆಯಲ್ಲಿ ಕುಳಿತು ಪೂರಾ ವಸೂಲು ಮಾಡಿಕೊಂಡು ಬಂದ. ಆ ಹಣದಿಂದ ಅವನು ಹೆಂಡತಿಗೆ ಬಳೆಮಾಡಿಸಿ ಹಾಕುವವರೆಗೂ ಅವನ ಸೋದರಮಾವ ಆ ಮನೆಯಿಂದ ಕದಲಲಿಲ್ಲ.





# ಬೇರೆವೇಷ

ಹಿಂದೆ ಶಿಳ್ಳಂಗೇರಿ ಎಂಬ ಗ್ರಾಮದಲ್ಲಿ ಧನಿಕನಾದೊಬ್ಬ ಧರ್ಮದಾತನು ಬಡ ಬ್ರಾಹ್ಮಣ್ಯರ ಸೌಕರ್ಯಕ್ಕಾಗಿ ಒಂದು ಛತ್ರ ಕಟ್ಟಿಸಿದ್ದ. ದಿನಕ್ಕೆ ಐದು ಮಂದಿ ಬ್ರಾಹ್ಮಣರು ಆ ಛತ್ರದಲ್ಲಿ ಹತ್ತುದಿನಗಳವರೆಗೆ ತಂಗಿರಬಹುದು. ಅಲ್ಲಿಯ ದೇವಾಲಯವು ಪ್ರಸಿದ್ಧ ಯಾತ್ರಾಸ್ಥಳವಾದುದರಿಂದ ಪ್ರತಿ ತಿಂಗಳೂ ಉತ್ಸವಗಳು ನಡೆಯುತ್ತಿದ್ದವು. ಬರುವ ಯಾತ್ರಿಕರೂ ಹೆಚ್ಚು. ಹಾಗೆ ಆ ಛತ್ರದಲ್ಲಿರುವ ಯಾತ್ರಿಕರಿಗೆ ದಿನಕ್ಕೆ ಒಂದು ರೂಪಾಯಿ ದಕ್ಷಿಣೆ ಕೂಡಾ ಕೊಡುತ್ತಾರೆ.

ಅಲ್ಲಿಗೆ ಸ್ವಲ್ಪ ದೂರದ ಗ್ರಾಮದಲ್ಲಿ ವೆಂಕಣ್ಣಭಟ್ಟನೆಂಬ ಒಬ್ಬ ಬ್ರಾಹ್ಮಣನಿದ್ದ. ಅವನೇನೂ ಬಡ ಬ್ರಾಹ್ಮಣನಲ್ಲ; ತಕ್ಕಷ್ಟು ವಸತಿಗಳಿರುವವನೇ ಆದರೂ ಲೋಭಗುಣದವನು. ಅದರ ಮೇಲೆ ದುರಾಶೆಯೂ ಬಹಳ. ಅಂತೆಯೇ ಅವನಿಗೆ ಹೇಗಾದರೂ ಒಂದು ತಿಂಗಳವರೆಗೆ ಶಿಳ್ಳಂಗೇರಿಯ ಛತ್ರದಲ್ಲಿ ತಂಗಿದ್ದು, ಒಂದು ತಿಂಗಳು ಖರ್ಚಿಲ್ಲದೆ ಊಟಮಾಡಿ, ಮೇಲೆ ಮೂವತ್ತು ರೂಪಾಯಿ ಸಂಪಾದಿಸಬೇಕೆಂದು ದುರ್ಬುದ್ಧಿ ಹುಟ್ಟಿತು. ಆದರೆ ಒಬ್ಬನೇ ಮನುಷ್ಯನನ್ನು ಹತ್ತು ದಿನಗಳಿಗಿಂತ ಹೆಚ್ಚು ಛತ್ರದಲ್ಲಿರಲು ಬಿಡುವುದಿಲ್ಲವಲ್ಲ ? ಅದಕ್ಕಾಗಿ ಅವನು ಒಂದು ಉಪಾಯ ಮಾಡಿದ. ಬೈರಾಗಿಯಂತೆ ಜುಟ್ಟು ಗಡ್ಡ ಮೀಸೆಗಳನ್ನು ಬೆಳೆಸಿಕೊಂಡು ಶಿಳ್ಳಂಗೇರಿಯ ಛತ್ರದಲ್ಲಿ ತಂಗಿದ.

ಭೋಜನ ವ್ಯವಹಾರಗಳನ್ನೂ, ದಕ್ಷಿಣೆ ಮುಂತಾದ ಲೆಕ್ಕಗಳನ್ನೂ ಇತರ ಕಾರ್ಯಗಳನ್ನೂ ನೋಡಿಕೊಳ್ಳಲು ರಘುರಾಮಯ್ಯನೆಂಬ ಗುಮಾಸ್ತನಿದ್ದನು. ಅವನು ಅದೇ ಗ್ರಾಮದಲ್ಲಿರುವ ಆಂಜನೇಯ ಗುಡಿಯ ಅರ್ಚಕನೂ ಆಗಿದ್ದನು. ಆ ಆಂಜನೇಯ ದೇವಾಲಯಕ್ಕೆ ಯಾವ ಸ್ಥಿರಾದಾಯವೂ ಇರಲಿಲ್ಲ. ಅಲ್ಲಿ ಕಡೇ ಪಕ್ಷ ದೀಪಗಳ ಖರ್ಚಿಗಾದರೂ ಹಣ ಸೇರಿಸುವ ಉದ್ದೇಶದಲ್ಲಿ ರಘುರಾಮಯ್ಯ ಒಂದು ಹುಂಡೀ ಪೆಟ್ಟಿಗೆಯನ್ನು ಇರಿಸಿದ್ದನು. ಭಕ್ತರು ಯಥಾಶಕ್ತಿ ಅದರಲ್ಲಿ ಕಾಣಿಕೆ ಹಾಕುತ್ತಿದ್ದರು.

ರಘುರಾಮಯ್ಯ ಛತ್ರದಲ್ಲಿರುವಾಗ ಆ ಹುಂಡೀ ಪೆಟ್ಟಿಗೆ ಅವನ ಮೇಜಿನ ಮೇಲಿರುತ್ತಿತ್ತು. ಅವನು ಬ್ರಾಹ್ಮಣರಿಗೆ ದಕ್ಷಿಣೆ ಕೊಡುವಾಗ, ದೇವರ ಹುಂಡೀ ಪೆಟ್ಟಿಗೆಗೆ ಕಾಣಿಕೆ ಹಾಕಲು ಇಷ್ಟವಿದ್ದವರು ಯಥಾಶಕ್ತಿ ಹಾಕಬಹುದೆಂದು ಯಾತ್ರಿಕರೊಂದಿಗೆ ಹೇಳಿಕೊಳ್ಳು

ಕೆ. ಪದ್ಮಾವತಿ

ತ್ತಿದ್ದನು. ರೂಪಾಯಿ ದಕ್ಷಿಣೆ ಪಡೆದುಕೊಂಡವರು ತಮಗೆ ತೋರಿದಷ್ಟು ಆ ಹುಂಡಿಯೊಳಗೆ ಹಾಕುವರು. ಆದರೆ ಪರಮಲೋಭಿಯಾದ ವೆಂಕಣ್ಣಭಟ್ಟ ಆ ಹುಂಡಿಯೊಳಗೆ ಒಂದು ಚಿಕ್ಕಾಸು ಕೂಡಾ ಹಾಕುವ ಗೊಡವೆಗೆ ಹೋಗಲಿಲ್ಲ.

ಹತ್ತು ದಿನಗಳು ಕಳೆದ ಮೇಲೆ ಹನ್ನೊಂದನೇದಿನ ವೆಂಕಣ್ಣಭಟ್ಟ ಬೆಳಿಗ್ಗೆ ಎದ್ದು ಅಲ್ಲಿಂದ ಹೊರಟು ಹೋದನು. ಮೊದಲೇ ಅಂದುಕೊಂಡಿದ್ದ ಒಂದು ಗುಟ್ಟಿನ ಸ್ಥಳಕ್ಕೆ ಹೋಗಿ ತನ್ನ ಗಡ್ಡವನ್ನು ಮಾತ್ರ ಪೂರ್ತಿಯಾಗಿ ಬೋಳಿಸಿಕೊಂಡು, ಉಡುಪುಗಳನ್ನೂ ಹೆಸರನ್ನೂ ಬದಲಾಯಿಸಿಕೊಂಡನು. ಆ ಮೇಲೆ ಆ ಛತ್ರಕ್ಕೆ ಬಂದು ಮತ್ತೊಂದು ಹತ್ತುದಿನ ಕಳೆದನು. ಹೊಟ್ಟೆಗೂ ಕೈಗೂ ಇಪ್ಪತ್ತು ದಿನಗಳ ಲಾಭ ದಕ್ಕಿತು.

ಆ ಮೇಲೆ ಅವನು ತಲೆ ಬೋಳಿಸಿಕೊಂಡು ಮೀಸೆಯನ್ನೂ ತೆಗೆದು ಮತ್ತೆ ವೇಷವನ್ನೂ ಹೆಸರನ್ನೂ ಬದಲಾಯಿಸಿ, ಮೂರನೇಸಾರಿ ಆ ಛತ್ರಕ್ಕೆ ಬಂದು ಮತ್ತೆ ಹತ್ತು ದಿನಗಳನ್ನು ಕಳೆದನು.

ಒಂದು ತಿಂಗಳು ಪೂರ್ತಿಯಾಯಿತು. ಕಡೆಯದಿನ ವೆಂಕಣ್ಣಭಟ್ಟ ಭೋಜನ ಮುಗಿಸಿ ತುಸು ವಿಶ್ರಮಿಸಿ ಅಲ್ಲಿಂದ ತನ್ನ ಗ್ರಾಮಕ್ಕೆ ಹೊರಡಲು ಸಿದ್ಧನಾಗುವಾಗ, ಗುಮಾಸ್ತ ರಘುರಾಮಯ್ಯ ಇಬ್ಬರು ಗ್ರಾಮದ ಬಂಟರೊಂದಿಗೆ ಬಂದು "ನ್ಯಾಯಾಧಿಕಾರಿಗಳ ಬಳಿಗೆ ನಡೆಯಯ್ಯ!" ಎಂದನು. ಬಂಟರು ವೆಂಕಣ್ಣಭಟ್ಟನನ್ನು ಹಿಡಿದು ಕರೆದೊಯ್ದರು. ರಘುರಾಮಯ್ಯ ಅವನು ಮಾಡಿದ ಮೋಸವನ್ನು ಕುರಿತು ನ್ಯಾಯಾಧಿಕಾರಿಗಳೊಂದಿಗೆ ಫಿರ್ಯಾದು ಮಾಡಿದನು.

"ಇವನ ವೇಷವೂ ಹೆಸರೂ ಬದಲಾಗಿರುವಾಗ ಇವನ ಗುರುತು ಹೇಗೆ ಗೊತ್ತಾಯಿತು?" ಎಂದು ನ್ಯಾಯಾಧಿಕಾರಿಗಳು ಪ್ರಶ್ನಿಸಿದರು.

ಅದಕ್ಕೆ ರಘುರಾಮಯ್ಯ, "ವೇಷ ಬದಲಾದರೂ ಹೆಸರು ಬದಲಾದರೂ ಸ್ವಭಾವ ಬದಲಾಗಲಾರದಷ್ಟೆ? ಈ ವೆಂಕಣ್ಣಭಟ್ಟ ಮೊದಲನೇ ಹತ್ತು ದಿನಗಳಲ್ಲಿ ಹುಂಡಿಗೆ ದುಡ್ಡು ಹಾಕಲಿಲ್ಲ. ವೇಷವನ್ನೂ ಹೆಸರನ್ನೂ ಬದಲಾಯಿಸಿಕೊಂಡು ಬಂದಾಗಲೂ ಹುಂಡಿಯನ್ನು ಕಣ್ಣೆತ್ತಿಯೂ ನೋಡಲಿಲ್ಲ. ಅನುಮಾನ ಬಂದು ಪರೀಕ್ಷಿಸಿಕೊಂಡೇ ಇದ್ದೆ. ಎಷ್ಟುದಿನ ಹೀಗೆ ಮೋಸ ಮಾಡುತ್ತಾನೆ ನೋಡೋಣವೆಂತಲೇ ಸ್ವಲ್ಪ ಬಿಟ್ಟುಕೊಟ್ಟೆ. ಇನ್ನು ಹೋಗುವನೆಂದು ಅವನು ರೂಪಾಯಿಗಳನ್ನೆಣಿಸಿ ಮುಗುಳುನಕ್ಕಾಗ ಸ್ಪಷ್ಟವಾಯಿತು." ಎಂದನು.

ನ್ಯಾಯಾಧಿಕಾರಿಗಳು ವೆಂಕಣ್ಣಭಟ್ಟನಿಗೆ ಐನೂರು ರೂಪಾಯಿ ಜುಲುಮಾನೆ ಹಾಕಿದರು. ಅಂತಹ ಲೋಭಿಗೆ ಅದು ತಕ್ಕ ಶಿಕ್ಷೆಯೇ ಸರಿಯೆಂದು ಎಲ್ಲರೂ ಅಂದುಕೊಂಡರು.



# ಸರ್ದಾರ್
# ವಲ್ಲಭಾಯ್ ಪಟೇಲ್



ಆಧುನಿಕ ಸ್ವತಂತ್ರ ಭಾರತದ ನಿರ್ಮಾಣಕರ
ಲ್ಲೊಬ್ಬರಾದ ವಲ್ಲಭಾಯ್ ಪಟೇಲ್ ಕಳೆದ
ಶತಮಾನ—೧೮೭೫ ಅಕ್ಟೋಬರ್ ೩೧ರ ದಿನ
ಗುಜರಾತಿನ ಕರಮ್‌ಸದ್ ಎಂಬ ಗ್ರಾಮದಲ್ಲಿ
ಹುಟ್ಟಿದರು.

ಚಿಕ್ಕತನದಿಂದಲೇ ವಲ್ಲಭಾಯ್‌ಯಲ್ಲಿ ಹಟವೂ,
ತಡೆಗಳನ್ನು ದಾಟುವ ಶಕ್ತಿಸಾಮರ್ಥ್ಯಗಳೂ
ಇದ್ದುವು. ಕುಟುಂಬದ ಆರ್ಥಿಕ ಪರಿಸ್ಥಿತಿಗಳು
ಅನುಕೂಲವಾಗಿಲ್ಲದಿದ್ದರೂ ಅವರು ಬಹಳ
ಕಷ್ಟಪಟ್ಟು ಓದಿ ನ್ಯಾಯಶಾಸ್ತ್ರದಲ್ಲಿ ಪಟ್ಟ
ಭದ್ರರಾದರು. ನ್ಯಾಯವಾದಿಯಾಗಿ ತಾವು
ಸಂಪಾದಿಸಿದ ಹಣದಿಂದ ತನ್ನ ಅಣ್ಣ ವಿಠಲ್
ಭಾಯ್ ಪಟೇಲರನ್ನು ಲಂಡನ್ನಿಗೆ ಕಳುಹಿಸಿ
ಬಾರ್ ಎಟ್ ಲಾ ಪರೀಕ್ಷೆ ಓದಿಸಿದರು. ಅವರು
ದೊಡ್ಡ ರಾಷ್ಟ್ರೀಯವಾದಿಯಾಗಿ ಪ್ರಸಿದ್ಧ
ರಾದರು. ವಲ್ಲಭಾಯ್ ಕೂಡಾ ಬಾರಿಷ್ಟರ್
ಪಾಸಾಗಿ ಅಹಮ್ಮದಾಬಾದಿನಲ್ಲಿ ನ್ಯಾಯವಾದೀ
ವೃತ್ತಿ ಪ್ರಾರಂಭಿಸಿದರು.





ಗಾಂಧೀಜೀ ದಕ್ಷಿಣ ಆಫ್ರಿಕಾಖಂಡದಿಂದ ಭಾರತ
ದೇಶಕ್ಕೆ ಹಿಂದಿರುಗಿ ಬಂದ ದಿನಗಳು ಅವು.
ಅವರು ಒಮ್ಮೆ ಗುಜರಾತ್ ಕ್ಲಬ್ಬಿನಲ್ಲಿ
ಉಪನ್ಯಾಸಮಾಡಿದರು. ಆಗ ಪ್ರೇಕ್ಷಕರ ಮಧ್ಯೆ
ವಲ್ಲಭಾಯ್ ಪಟೇಲ್ ಇದ್ದರೂ ಗಾಂಧೀಜಿಯ
ಉಪನ್ಯಾಸವು ಅವರನ್ನೇನೂ ಆಕರ್ಷಿಸಲಿಲ್ಲ.
ಕೆಲವು ದಿನಗಳ ಮೇಲೆ ಗಾಂಧೀಜಿ ಬೀಹಾರಿನ
ಚಂಪಾರನ್ ಪ್ರಾಂತದಲ್ಲಿ ಒಂದು ಪ್ರಜೆಗಳ
ಉದ್ಯಮ ಪ್ರಾರಂಭಿಸಿದರು. ಅಲ್ಲಿಯ ನೀಲೀ
ರಂಗಿನ ತೋಟದಲ್ಲಿ ಕೆಲಸ ಮಾಡುವ ಕೂಲಿ
ಗಳಿಗೆ, ಯಜಮಾನರು ಸರಿಯಾದ ಕೂಲಿ
ಕೊಡದೆ, ಅತಿ ದಾರುಣವಾಗಿ ತಮ್ಮ ಗಂಟು
ಕಟ್ಟಿಕೊಳ್ಳುತ್ತಿದ್ದರು. ಆ ಉದ್ಯಮದಲ್ಲಿ



ಗಾಂಧೀಜಿ ತೋರಿಸಿದ ಹಟವೂ, ಧೈರ್ಯ ಸಾಹಸಗಳೂ ವಲ್ಲಭಭಾಯ್‌ಯನ್ನು ತುಂಬಾ ಆಕರ್ಷಿಸಿದುವು.

ಆ ಕಾಲದಲ್ಲಿ ಖೇಡಾ ಜಿಲ್ಲೆಯಲ್ಲಿ ಭಯಂಕರವಾದ ಕ್ಷಾಮ ಉಂಟಾಯಿತು. ಪ್ರಜೆಗಳು ಹೊಟ್ಟೆಗಿಲ್ಲದೆ ಒದ್ದಾಡುವಾಗ ಸರಕಾರವು ನಿರ್ಬಂಧಪಡಿಸಿ ತೆರಿಗೆ ವಸೂಲು ಮಾಡಲು ಪ್ರಯತ್ನಿಸುತ್ತಿತ್ತು. ಗಾಂಧೀಜಿ ಅದಕ್ಕೆ ವ್ಯತಿರೇಕವಾಗಿ ಸತ್ಯಾಗ್ರಹ ಮಾಡಲು ಪ್ರಾರಂಭಿಸಿದರು. ಆ ಸತ್ಯಾಗ್ರಹದಲ್ಲಿ ವಲ್ಲಭಭಾಯ್ ಗಾಂಧೀಜೀಗೆ ಬಲಭುಜವಾಗಿ ನಿಂತರು. "ವಲ್ಲಭಭಾಯ್ ಸಹಾಯವಿಲ್ಲದೆ ಹೋಗಿದ್ದರೆ ಉದ್ಯಮವು ಜಯವಾಗುತ್ತಿದ್ದಿಲ್ಲ" ಎಂದಿದ್ದಾರೆ ಗಾಂಧೀಜಿ.

ಖೇಡಾ ಸತ್ಯಾಗ್ರಹದ ಕಾಲದಿಂದಲೂ ವಲ್ಲಭಭಾಯ್ ಪೂರ್ತಿ ತಮ್ಮ ಕಾಲವನ್ನು ದೇಶದ ಪ್ರಜೆಗಳ ಕ್ಷೇಮಕ್ಕಾಗಿಯೇ ವಿನಿಯೋಗಿಸಿದರು. ಅದರಲ್ಲಿ ಅವರು ಪ್ರತಿಭಾವಂತರಾದ ಸ್ವದೇಶೀ ಉದ್ಯಮದ ನಿರ್ಮಾಣಕರೆಂದು ಹೆಸರು ಪಡೆದರು. ಮುಖ್ಯವಾಗಿ ಅವರು ೧೯೨೦ರ ಅಸಹಕಾರ ಚಳುವಳಿಯ ಉದ್ಯಮದಲ್ಲಿ ಎಣೆಯಿಲ್ಲದ ಪಾತ್ರವಹಿಸಿದ್ದಾರೆ. ಭೂಕಂದಾಯವನ್ನು ಹೆಚ್ಚಿಸಲು ಸರಕಾರವು ಪ್ರಯತ್ನಿಸಿದಾಗ, ಬಾರ್ಡೋಲೀ ಪ್ರಾಂತದ ರೈತರನ್ನು ಒಟ್ಟುಗೂಡಿಸಿ ಅವರು ವಿಜಯ ಸಾಧಿಸಿದರು. ಆಗಿನಿಂದ ಪ್ರಜೆಗಳು ಅವರನ್ನು ಸರ್ದಾರ್ ವಲ್ಲಭಭಾಯ್ ಎಂದು ಕರೆಯತೊಡಗಿದರು.





೧೯೩೧ನೇ ವರ್ಷ ಕರಾಚೀ ನಗರದಲ್ಲಿ ನಡೆದ ಭಾರತದ ರಾಷ್ಟ್ರೀಯ ಕಾಂಗ್ರೆಸ್ ಮಹಾ ಸಭೆಗೆ ಸರ್ದಾರ್ ವಲ್ಲಭಭಾಯ್ ಅಧ್ಯಕ್ಷರು. ಆಮೇಲೆ ಕೆಲವು ದಿನಗಳಲ್ಲೇ ಅವರನ್ನು ಸರಕಾರವು ಅರೆಸ್ಟು ಮಾಡಿ ಗಾಂಧೀಜಿಯೊಂದಿಗೆ ಎರವಾಡ ಜೈಲಿನಲ್ಲಿ ಹದಿನಾರು ತಿಂಗಳ ವರೆಗೆ ನಿರ್ಬಂಧದಲ್ಲಿಟ್ಟಿತು.



೧೯೩೯ರಲ್ಲಿ ಎರಡನೇ ಪ್ರಪಂಚ ಯುದ್ಧವು ಪ್ರಾರಂಭವಾದಾಗ ಬ್ರಿಟಿಷ್ ಸರಕಾರವು ರಾಷ್ಟ್ರೀಯ ನಾಯಕರೊಂದಿಗೆ, ಯಾವ ವಿಚಾರಣೆಯನ್ನೂ ಮಾಡದೆ ಭಾರತ ದೇಶವನ್ನು ಆ ಯುದ್ಧಕ್ಕೆ ಎಳೆಯಿತು. ಇದು ರಾಷ್ಟ್ರೀಯ ನಾಯಕರಿಗೆ ತುಂಬ ಅಸಂತೃಪ್ತಿಯನ್ನುಂಟು ಮಾಡಿತು, "ಯುದ್ಧದಲ್ಲಿ ನಮ್ಮ ಸಹಕಾರವು ಬೇಕಾಗಿದ್ದರೆ ಮೊದಲು ನಮ್ಮ ದೇಶ ಸ್ವತಂತ್ರವಾಗಬೇಕು." ಎಂದು .ರಾಷ್ಟ್ರೀಯ ಕಾಂಗ್ರೆಸ್ ತೀರ್ಮಾನಿಸಿತು, ಅಷ್ಟೇ ಅಲ್ಲದೆ, ತತ್ಕ್ಷಣವೇ ಬ್ರಿಟಿಷ್ ಸರಕಾರವು ದೇಶದಿಂದ ಹೊರಟು ಹೋಗಬೇಕೆಂದು ಘೋಷಣೆ ಕೊಟ್ಟಿತು.



ಗಾಂಧೀಜೀ, ಸರ್ದಾರ್ ವಲ್ಲಭಾಯ್ ಪಟೇಲ್ ಮೊದಲಾದ ಪ್ರಮುಖ ಕಾಂಗ್ರೆಸ್ ನಾಯಕರೆಲ್ಲಾ ಅರೆಸ್ಟ್ ಮಾಡಲ್ಪಟ್ಟರು. ಪ್ರಜೆಗಳ ವ್ಯತಿರೇಕತೆಯನ್ನು ಬ್ರಿಟಿಷ್ ಸರಕಾರವು ಅತಿ ಕ್ರೂರವಾಗಿ ಅಡಗಿಸಲು ನೋಡಿತು. ಪ್ರಜಾ ಸಮೂಹದ ಮೇಲೆ ಇಷ್ಟಬಂದಂತೆ ಗೋಲೀಬಾರ್ ನಡೆಯಿತು. ಬಂಡಾಯವೆದ್ದವರೆಲ್ಲ ಜೈಲಿನಲ್ಲಿ ನಾನಾ ಹಿಂಸೆಗಳಿಗೆ ಗುರಿಯಾಗಬೇಕಾಯಿತು.



ಭಾರತೀಯರು ಕೆಲವು ದಶಮಾನಗಳಿಂದ ಸ್ವಾತಂತ್ರ್ಯಕ್ಕಾಗಿ ಮಾಡಿದ ಹೋರಾಟ ಮತ್ತು ತ್ಯಾಗಗಳ ಫಲಿತವಾಗಿ ಭಾರತ ದೇಶಕ್ಕೆ ೧೯೪೭ ಆಗಸ್ಟ್ ೧೫ರ ದಿನ ಸ್ವಾತಂತ್ರ್ಯವು ಸಿದ್ಧಿಸಿತು. ದೇಶಕ್ಕೆ ಪಂಡಿತ್ ನೆಹ್ರೂ ಪ್ರಧಾನಮಂತ್ರಿಯಾದರು. ಸರ್ದಾರ್ ವಲ್ಲಭಾಯ್ ಪಟೇಲ್ ಉಪಪ್ರಧಾನಿ.

ಭಾರತ ದೇಶವು ಸ್ವತಂತ್ರವಾದ ತರುಣದಲ್ಲಿಯೇ ಅನೇಕ ವಿಷಮ ಸಮಸ್ಯೆಗಳು ಇದಿರಾದುವು. ದೇಶದ ಅನೇಕ ಪ್ರಾಂತಗಳಲ್ಲಿ ಹಿಂದೂ ಮುಸ್ಲಿಂರ ಕಲಹಗಳೆದ್ದುವು. ಸರ್ದಾರ್ ವಲ್ಲಭಭಾಯ್ ಪಟೇಲ್ ಎಷ್ಟೋ ನೈಪುಣ್ಯತೆ, ದಕ್ಷತೆಗಳಿಂದ ಅವುಗಳನ್ನು ಅಂಕೆಯೊಳಗೆ ತಂದರು.





ದೇಶದಲ್ಲಿ ಚಿಕ್ಕವೂ ದೊಡ್ಡವೂ ಕೂಡಿ ಸುಮಾರು ಆರುನೂರು ಸ್ವದೇಶ ಸಂಸ್ಥಾನಗಳಿದ್ದುವು. ಈ ಸಂಸ್ಥಾನಾಧಿಪತಿಗಳಲ್ಲಿ ಕೆಲವರು, ಬ್ರಿಟಿಷ್ ಸರಕಾರವು ಹೊರಟುಹೋಗುತ್ತಲೇ ತಾವು ಸರ್ವಸ್ವತಂತ್ರರೆಂಬ ಕನಸು ಕಂಡರು. ಆದರೆ ಸರ್ದಾರ್ ವಲ್ಲಭಭಾಯ್ ಪಟೇಲ್ ದೃಢನಿಶ್ಚಯದಿಂದ, ಬಲವಾದ ಶಾಸನ ಚರ್ಯೆಗಳ ಮೂಲಕ ಈ ಸಂಸ್ಥಾನಗಳೆಲ್ಲವನ್ನೂ ರದ್ದುಮಾಡಿ ದೇಶದೊಂದಿಗೆ ಐಕ್ಯಗೊಳಿಸಿದರು.

ಈ ವಿಧಗಾಗಿ ಸರ್ದಾರ್ ವಲ್ಲಭಭಾಯ್ ಪಟೇಲ್ ರಾಷ್ಟ್ರೀಯ ಜೀವನ ರಂಗದಲ್ಲಿ ಎಷ್ಟೋ ಗುಡ್ಡದಂತಹ ಸಮಸ್ಯೆಗಳನ್ನು ಇದಿರಿಸಿ ಜಯಶಾಲಿಯಾಗಿ ನಿಂತರು. ಭಾರತ ದೇಶದಲ್ಲಿ ಜನ್ಮವೆತ್ತಿದ ಮಹನೀಯರಲ್ಲಿ ಒಬ್ಬರೆಂದು ನಿಸ್ಸಂಶಯವಾಗಿ ಹೇಳಬಹುದಾದ ಇವರು, ೧೯೫೦ನೇ ವರ್ಷ ಅಮರರಾದರು. ದೇಶದ ಸ್ವಾತಂತ್ರ್ಯಕ್ಕಾಗಿ ಸರ್ದಾರ್ ವಲ್ಲಭಭಾಯ್ ಪಟೇಲ್ ಮಾಡಿದ ಸೇವೆಗಳು ಅಮೂಲ್ಯವಾದುವು.



# ಕಥಾ ಶೀರ್ಷಿಕೆಯ ಸ್ಪರ್ಧೆ

## ಈ ಕಥೆಗೆ ಒಳ್ಳೆಯ ಶೀರ್ಷಿಕೆಯನ್ನು ಇಟ್ಟು ರೂ. ೨೫ ಗೆಲ್ಲಿರಿ!

?

ಒಮ್ಮೆ ಕೆಲವುಂದಿ ವರ್ತಕರು ಸಮುದ್ರದ ಮಧ್ಯದಲ್ಲಿ ಒಂದು ದ್ವೀಪವನ್ನು ನೋಡಿದರು. ಐವತ್ತು ವರ್ಷಗಳಿಂದ ಆ ಭಾಗದಲ್ಲಿ ಹಡಗು ನಡೆಸಿಕೊಂಡಿದ್ದ ನಾವಿಕರು ಕೂಡಾ ಅಲ್ಲಿ ಆ ದ್ವೀಪವಿರುವುದನ್ನು ಕಂಡಿರಲಿಲ್ಲ.

ಹಡಗಿನ ಒಡೆಯ ಆ ದ್ವೀಪದ ಬದಿಯಲ್ಲಿ ಲಂಗರು ಇಳಿಸಿದನು. ವರ್ತಕರು ದ್ವೀಪದೊಳಗೆ ಹೋದರು. ಅಲ್ಲಿ ಒಂದು ನಗರವಿದ್ದಿತು. ಅಲ್ಲಿಯ ಮನುಷ್ಯರು ತಮ್ಮ ಪಾಡಿಗೆ ಬಗೆಬಗೆಯಾಗಿ ಜೀವನ ನಡೆಸಿಕೊಂಡಿದ್ದರು.

ಆದರೆ ಈ ವರ್ತಕರನ್ನು ಅಲ್ಲಿನವರಾರೂ ಗಮನಿಸಲಿಲ್ಲ. ವರ್ತಕರು ಮಾತಾಡಿಸಿದರೂ ಯಾರೂ ಕಿವೀ ಮೇಲೆ ಹಾಕಿಕೊಳ್ಳಲಿಲ್ಲ. ವರ್ತಕರಿಗೆ ಅಲ್ಲಿಯ ಮನುಷ್ಯರನ್ನು ಮುಟ್ಟಲಿಕ್ಕೂ ಸಾಧ್ಯವಾಗಲಿಲ್ಲ. ಅದನ್ನು ನೋಡಿ ಆಶ್ಚರ್ಯಪಡುತ್ತ ವರ್ತಕರು ರಾಜಭವನಕ್ಕೆ ಹೋದರು. ರಾಜನು ದರ್ಬಾರು ನಡೆಸಿಕೊಂಡಿದ್ದ.

ಹಡಗಿನ ಒಡೆಯ ತನ್ನನ್ನು ಯಾರೂ ಗುರುತಿಸುವುದಿಲ್ಲವೆಂಬ ನಂಬುಗೆಯಲ್ಲಿ ನೆಟ್ಟಗೆ ರಾಜನ ಬಳಿಗೆ ಹೋಗಿ, ಅವನ ಮುಖದಲ್ಲಿ ಮುಖವಿಟ್ಟು ಅವನ ಕಣ್ಣುಗಳನ್ನು ನೋಡಿದನು. ಕೂಡಲೇ ರಾಜನು ಮುದುಡಿ ಬಿದ್ದುಬಿಟ್ಟ.

ಆಸ್ಥಾನದ ಮಾಂತ್ರಿಕನು ಬಂದು ರಾಜನನ್ನು ಪರೀಕ್ಷಿಸಿ, "ಬದುಕಿರುವವರ ಗಾಳಿ ಈ ರಾಜನಿಗೆ ತಗಲಿದೆ. ಅವರನ್ನು ಮಾರಣ ಹೋಮ ಮಾಡಿಬಿಡುತ್ತೇನೆ" ಎಂದನು.

ಈ ಮಾತು ಕೇಳಿದ ಕೂಡಲೇ ವರ್ತಕರು ಓಡುತ್ತಾ ಹೋಗಿ ತಮ್ಮ ಹಡಗನ್ನು ಏರಿ, ಲಂಗರೆತ್ತಿಸಿ ತಮ್ಮ ದಾರಿಯಲ್ಲಿ ಸಾಗಿದರು. ಅವರು ತಿರುಗಿ ನೋಡಿದಾಗ, ಅಲ್ಲಿ ದ್ವೀಪವೇ ಇರಲಿಲ್ಲ. ಬರೀ ಸಮುದ್ರ!

★ ★ ★

ಮೇಲಿನ ಕಥೆಗೆ ಒಳ್ಳೆಯ ಹೆಸರನ್ನು ಆಲೋಚನೆ ಮಾಡಿ, ಪೋಸ್ಟುಕಾರ್ಡಿನಲ್ಲಿಯೇ ನಿಮ್ಮ ಹೆಸರು ವಿಳಾಸದೊಂದಿಗೆ ಬರೆದು "ಕಥಾ ಶೀರ್ಷಿಕೆಯ ಸ್ಪರ್ಧೆ" ಚಂದಮಾಮ, ೨ & ೩ ಆರ್ಕಾಟ್ ರೋಡು, ವಡಪಳನಿ, ಮದ್ರಾಸು - ೬೦೦೦೨೬ ಎಂಬ ವಿಳಾಸಕ್ಕೆ ಕಳುಹಿಸಿರಿ.

ಇದು ಮೇ ೧೫ ರೊಳಗೆ ತಲಪಬೇಕು. ಅದರಲ್ಲಿ "ಫೋಟೋ ಶೀರ್ಷಿಕೆಯ ಸ್ಪರ್ಧೆ" ಬರೆದಿರಬಾರದು. ಫಲಿತಾಂಶ '೭೭ ಜೂಲೈ ಚಂದಮಾಮದಲ್ಲಿ ಪ್ರಕಟವಾಗುತ್ತದೆ.

---

ಮಾರ್ಚಿಯ ಸ್ಪರ್ಧೆಯ ಫಲಿತಾಂಶ: **ಧೂರ್ತಜಿಪುಣ**

ಕಳುಹಿಸಿದವರು: ಶಿವಪ್ಪ, ಬಿ. ಮೆಲವಂಕಿ, ನೇಗಿನಹಾಳ, ಬೈಲಹೊಂಗಲ, ಬೆಳಗಾವಿ.

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

**ಗೆದ್ದ ಶೀರ್ಷಿಕೆಗಳು ೧೯೭೭ ಜೂಲೈ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ**



D. A. Narasimha Raju





D. Jagdish Chandra

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿರುವಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಮೇ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು - ೬೦೦೦೨೬.

---

## ಮಾರ್ಚಿಯ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ: ಮುದಿ ಜೀವ ಮೂಲೆಗೆ

ಎರಡನೇ ಫೋಟೋ: ಒಣ ಮರ ಒಲೆಗೆ

ಕಳುಹಿಸಿದವರು: **ಬಿ. ಎಂ. ಶೀಲಮ್ಮ,**

D/o. ಬಿ. ಪಿ. ಮಾದಪ್ಪ, ಹೊಸೂರುಬೆಟ್ಟಕೆರಿ, ಅಮ್ಮತ್ತಿ, ಕೊಡಗು.

**Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama**






















ರಸಭರಿತ
ಸ್ವಾದಿಷ್ಟ
ಬಲು ಇಷ್ಟ






ಪಾರ್ಲೆ
ಪಾಪಿನ್ಸ್
ಹಣ್ಣುಗಳ ಸ್ವಾದವುಳ್ಳ ಮಿಠಾಯಿಗಳು



5 ಹಣ್ಣುಗಳ ಸ್ವಾದಗಳು – ರಾಸ್ಬೆರಿ, ಅನಾನಸ್, ನಿಂಬೆ, ಕಿತ್ತಳೆ ಮತ್ತು ಮುಸಂಬಿ.

everest/871/PP-



May 1977

# ಮಾಯಾಸರೋವರ

## ೧೬

[ಜಯಶೀಲನು ಬಿಟ್ಟ ಬಾಣವು ನರವಾನರಕ್ಕೆ ತಗಲುತ್ತಲೇ ಕೃಪಾಣಜಿತ್ತು ಬೆಟ್ಟದ ಕೆಳಗೆ ನೋಡಿ ಆ ಬಾಣ ಬಿಟ್ಟವನ ಗುರುತು ಹಿಡಿದನು. ಕೂಡಲೇ ಅವನು ಗಡೇಗುಡ್ಡನ ಅನುಚರರೊಂದಿಗೆ ಅವರ ಕೇರಿಗೆ ಓಡಿಹೋದನು. ಗಡೇಗುಡ್ಡ ಅವನನ್ನು ಅವಹೇಳನೆ ಮಾಡಲು, ಕೃಪಾಣಜಿತ್ತು ನರವಾನರವನ್ನು ಅವನ ಮೇಲೆಯೇ ಕೆರಳಿಸಿ ಬಿಟ್ಟ.]

ಗಡೇಗುಡ್ಡನ ಅನುಚರರು ಹೇಡಿಗಳೇನಲ್ಲ. ಅವರು ತಮ್ಮ ಒಡೆಯನನ್ನು ರಕ್ಷಿಸಲು ಆಯುಧಗಳನ್ನೆತ್ತಿಕೊಂಡು ಕೃಪಾಣಜಿತ್ತುವಿನ ಮೇಲೆ ಬೀಳಲು ಧಾವಿಸಿದರು. ಅವರೆಲ್ಲ ಕುಳ್ಳರಾದರೂ, ಅವರ ವೀರಾವೇಶವನ್ನು ನೋಡಿ ಕೃಪಾಣಜಿತ್ತು ಭಯದಿಂದ ನಡುಗಿದನು.

ತನ್ನ ಮುಂದೆ ಅವರೆಷ್ಟೇ ಅಲ್ಪಬಲದವರಾದರೂ ಗುಂಪಾಗಿರುವವರ ಮುಂದೆ ತಾನೊಬ್ಬನೇ ಹೆಣಗುವುದು ಸಾಧ್ಯವಿಲ್ಲದ ಮಾತು. ಆ ಕುಳ್ಳರು ತಮ್ಮ ನಾಯಕನ ರಕ್ಷಣೆಗಾಗಿ ವೀರ ಇರುವೆಗಳ ಹಾಗೆ ಸಾಯಲಿಕ್ಕೂ ಸಿದ್ಧರಾಗಿದ್ದಾರೆಂದು ಅವನಿಗೆ ತೋರಿತು. ಈ ಇಕ್ಕಟ್ಟಿನ ಕುತ್ತಿನಿಂದ ತನ್ನನ್ನು ಕಾಪಾಡಿಕೊಳ್ಳಲು ತವಕಿಸಿದನು.

ಮರುಕ್ಷಣದಲ್ಲಿ ಕೃಪಾಣಜಿತ್ತು ಒಂದು ನಿಶ್ಚಯಕ್ಕೆ ಬಂದು, ಶಾಂತವಾಗಿ ಕಿರುನಗು ತೋರಿಸುತ್ತ ತನ್ನನ್ನು ಸುತ್ತಿಕೊಂಡ ಕುಳ್ಳರ ಕಡೆಗೆ ನೋಡಿ, "ತಡೆಯಿರಿ, ಸ್ವಲ್ಪ ನಿಧಾನಿಸಿರಿ. ನಾನು ನಿಮ್ಮ ಮಿತ್ರನೆಂಬುದನ್ನು ಆಲೋಚಿಸಿರಿ. ಆ ನರವಾನರವನ್ನು ನಾನು ಎಷ್ಟು ಚೆನ್ನಾಗಿ ಪಳಗಿಸಿದ್ದೇನೆಂದು ನಿಮ್ಮ ನಾಯಕನಿಗೆ ನಿರೂಪಿಸಬೇಕೆಂತಲೇ ಅವ



ನನ್ನು ಹಿಡಿದುಕೊಳ್ಳಲು ಹೇಳಿದೆನೇ ಹೊರತು ಮತ್ತೇನಿಲ್ಲ. ನಿಮಗೆ ದ್ರೋಹಮಾಡಿ ನನಗೇನಾಗಬೇಕಾಗಿದೆ?" ಎಂದು ಹೇಳಿ, ವಾನರದ ಕೈಗೆ ಸಿಕ್ಕಿಕೊಂಡ ಗಡೇಗುಡ್ಡನನ್ನು ಬಿಡಿಸಿದನು.

ಗಡೇಗುಡ್ಡನು ಪ್ರಾಣಭೀತಿಯಿಂದ ತರಗೆಲೆಯಂತೆ ನಡುಗುತ್ತ, ದೂರದಲ್ಲಿದ್ದ ಒಂದು ಗುಡಿಸಲಿನ ಮುಂದೆ ಹೋಗಿ, ಅಲ್ಲಿದ್ದ ಒಂದು ಒಣಮರದ ತುಂಡಿನ ಮೇಲೆ ಉಸ್ಸೆಂದು ಕುಳಿತನು. ತಾನು ಯಮನ ಕೈಯಿಂದ ಪಾರಾದೆನೆನಿಸಿತ್ತು ಅವನಿಗೆ. ಅವನ ಅನುಚರರೆಲ್ಲರೂ ಅವನ ಸುತ್ತಲೂ ಸೇರಿ, ಈಗೇನು ಮಾಡಬೇಕೆಂದು ಕೇಳಿದರು. ಎಲ್ಲಿಂದಲೋ ಬಂದು ಸೇರಿದ ಈ ಮಹಾಕಾಯನ ಸಹಾಯವನ್ನು ಕೇಳಿ, ತಾನು ಅಸಲಿಗೇ ಮೋಸ ತಂದುಕೊಂಡೆನೆಂದು ಗಡೇಗುಡ್ಡನಿಗೆ ಬಹಳ ಯೋಚನೆಯಾಗಿತ್ತು. ನಮ್ಮ ನಮ್ಮೊಳಗಿನ ಜಗಳಕ್ಕೆ ಈ ಮಹಾಕಾಯ ಪರ್ವತ ಪ್ರಾಣಿಗಳನ್ನು ಇಟ್ಟುಕೊಂಡದ್ದು ಬಹು ದೊಡ್ಡ ತಪ್ಪಾಯಿತೆಂದು ಅವನಿಗೆ ಈಗ ಪಶ್ಚಾತ್ತಾಪವಾಗಿತ್ತು.

ಅವನು ಒಂದು ನಿಟ್ಟುಸಿರುಬಿಟ್ಟು, ತಲೆಯೆತ್ತಿ ತನ್ನ ಅನುಚರರನ್ನು ನೋಡಿ, ಸಣ್ಣ ಕಂಠಸ್ವರದಿಂದ, "ಈಗ ನಾನು ಹೇಳುವ ಮಾತನ್ನು ಲಕ್ಷ್ಯಗೊಟ್ಟು ಕೇಳಿರಿ. ಆನೆಯಂಥ ಶರೀರದ ಆ ಮಹಾಕಾಯನು ತನ್ನ ವಾನರದ ಬಳಿಯಲ್ಲೇ ನಿಂತುಕೊಂಡು ನಾವೇನು ಮಾಡುತ್ತೇವೆಂದು ಕಣ್ಣು ಹೊರಳಿಸಿ ಹೊರಳಿಸಿ ನೋಡುತ್ತಿದ್ದಾನೆ. ಅವನೊಂದಿಗೆ ಎದುರೆದುರೇ ಹೋರಾಡಿ ಜಯಿಸಲು ನಮ್ಮಿಂದಾಗದು. ಏನಾದರೊಂದು ಉಪಾಯದಿಂದ ಅವನ ಕೈಯಲ್ಲಿರುವ ಕತ್ತಿಯನ್ನೂ, ಆ ವಾನರ ಭೂತವನ್ನೂ ಬೇರ್ಪಡಿಸಿಬಿಡಬೇಕು. ಆಗ ನಮ್ಮಲ್ಲಿ ಕೆಲವರು ಸತ್ತರೂ ಅವನನ್ನು ಕೊಂದು ಪೀಡೆ ಪರಿಹಾರ ಮಾಡಿಕೊಳ್ಳಬಹುದು" ಎಂದನು.

"ಅದು ನಿಜ. ಚೆನ್ನಾಗಿದೆ. ಆದರೆ ಅವನಿಗೆ ತಿಳಿಯದಂತೆ ಆಗಬೇಕಲ್ಲ? ಉಪಾಯವೇನು?" ಎಂದು ಒಬ್ಬ ಕುಳ್ಳ ಕೇಳಿದ.

"ಈ ಮಹಾಕಾಯದವನು ಸತ್ತ ಸಮಾಚಾರ ಗೊತ್ತಾದ ಕೂಡಲೇ ಗಡೇಕಾರ ರಾಣಿ ನಮ್ಮೆಲ್ಲರನ್ನೂ ಸುಲಭದಲ್ಲಿ ನಾಶಮಾಡಲು ಸಾಧ್ಯವಿಲ್ಲಯಲ್ಲಾ? ಈಗ ಆ ದುಷ್ಟಳಿಗೆ ರಾಕ್ಷಸರಂಥ ಇಬ್ಬರು ಮಹಾಕಾಯರು ಬೇರೆ ಸಹಾಯಕರಾಗಿದ್ದಾರೆ. ಆ ಸಂಗತಿಯನ್ನು ಕೂಡ ನಾವು ಮರೆಯುವಂತಿಲ್ಲವಷ್ಟೆ?" ಎಂದು ಇನ್ನೊಬ್ಬ ಕುಳ್ಳ ನೆನಪು ಮಾಡಿದ.

ಗಡೇಗುಡ್ಡ ಹಾಗೆ ಹೇಳಿದವನನ್ನು ಕೋಪದಿಂದ ನೋಡುತ್ತ, "ಹಾಗೊಂದು ವೇಳೆ ಸಾಯು ದಾದರೆ ನಮ್ಮ ಜಾತಿಯವರ ಕೈಯಲ್ಲೇ ಸಾಯೋಣ. ಅದೂ ಬೇಡ, ನಾವೆಲ್ಲಾ ಆ ಗಡೇರಾಣಿಯ ಬಳಿಗೆ ಹೋಗಿ ಶರಣು ಶರಣು ಅಂತ ರೋದಿಸಿ ಮೇಲೆ ಅವಳಿಗೆ ವಿಧೇಯರಾಗಿರುವೆವೆಂದೂ,

ಡುತ್ತೇವೆಂದೂ ಹೇಳೋಣ. ಅವಳು ಕನಿಕರ ದ ಕ್ಷಮಿಸದೆ ಹೋಗಲಾರಳು, ಆದರ ಬದಲಿಗೆ ಮಹಾಕಾಯನ ಕೈಯಲ್ಲಿ ನಜ್ಜುಗುಜ್ಜಾಗಿ ಯಬೇಕೇನು ?" ಎಂದನು.

"ಆ ಕೆಲಸ ಈಗಲೇ ಮಾಡಬಹುದಲ್ಲಾ ?" ದು ಒಬ್ಬನು ದೊಡ್ಡ ಧ್ವನಿಯಿಂದಲೇ ಕೂಗಿದ. ದನ್ನು ಕೇಳಿ ಗಡೇಗುಡ್ಡನು ಕೆಟ್ಟ ಸಿಟ್ಟಿನಿಂದ ಎಟಕು ತಿದ್ದ ಒಂದು ದೊಣ್ಣೆಯನ್ನೆತ್ತಿ ಹಾಗೆ ಕೂಗಿದವ ನ್ನು ಜೋರಾಗಿ ಹೊಡೆದನು.

ದೂರದಲ್ಲಿದ್ದು ಇದನ್ನೆಲ್ಲಾ ನೋಡುತ್ತಿದ್ದ ಪಾಣಜಿತ್ತು, ಗಡೇಗುಡ್ಡನು ತನ್ನ ಅನುಚರ ೊಂದಿಗೆ ಒಮ್ಮೆಗೇ ತನ್ನ ಮೇಲೆ ಮುಗಿಬೀಳುವ ಲೋಚನೆಯಲ್ಲಿರುವನೆಂದು ಅನುಮಾನಿಸಿ, ನರ ನರವನ್ನು ಹಗ್ಗದಿಂದೆಳೆಯುತ್ತ ಅವನ ಹತ್ತಿರ ದು, "ಈಗ ನೀವು ಮಾಡುತ್ತಿರುವ ಉಪಾಯ ನು ? ಎಲ್ಲರೊಟ್ಟಿಗೆ ಒಂದೇಸಾರಿ ನನ್ನ ಮೇಲೆ ದ್ದು ಕೊಲ್ಲಬೇಕೆಂದಿರುವಿರಾ ? ನಿಜ ಹೇಳಿಬಿಡಿ. ನಿಮಗೆ ನಂಬುಗೆ ಇಲ್ಲದಿದ್ದರೆ ಎರಡರಲ್ಲೊಂದು ತೀರಿಸಿಬಿಡೋಣ" ಎನ್ನುತ್ತ ಕಟಕಟನೆ ಹಲ್ಲು ಕಡಿದ.

ಗಡೇಗುಡ್ಡನು ತನ್ನ ಅನುಚರರೆಲ್ಲ ನಿಶ್ಶಬ್ದ ವಾಗಿರುವಂತೆ ಕೈಯಾಡಿಸಿ, ತಾನು ಕುಳಿತಿದ್ದ ಮರದ ತುಂಡಿನ ಮೇಲೆಯೇ ನಿಂತುಕೊಂಡು ಕೃಪಾಣ ಜಿತ್ತುವನ್ನು ನೋಡಿ, "ಅಯ್ಯಾ ಮಹಾಕಾಯನೇ, ನಾವು ಆಲೋಚನೆ ಮಾಡುವ ಉಪಾಯ ಮತ್ತೇ ನಿಲ್ಲ, ಈಗಿನ ಪರಿಸ್ಥಿತಿ ಹೇಗಿರುವುದೆಂದರೆ, ಅತ್ತ ಗಡೇಕಾರೀ ರಾಣಿಯಾಗಲಿ, ಅಥವಾ ನೀವೇ ಆಗಲಿ, ನಮ್ಮೆಲ್ಲರನ್ನೂ ಕೆಲವೇ ಕ್ಷಣಗಳಲ್ಲಿ ಹತಮಾಡಿ ಬಿಡ ಬಲ್ಲಿರಿ. ಅದಕ್ಕಾಗಿ ಸೂರ್ಯನು ಮುಳುಗುವುದ ರೊಳಗೆ ನಾವೆಲ್ಲಾ ಈ ಕೇರಿಯನ್ನು ಬಿಟ್ಟು ಕಾಡಿ ನಲ್ಲಿ ಎತ್ತಾದರೂ ದೂರ ಓಡಿಬಿಡಬೇಕೆಂದಿದ್ದೇವೆ. ಅದೇ ನಮ್ಮ ಆಲೋಚನೆ. ನಿಮ್ಮನ್ನು ಎದುರಿಸಿ ಗೆಲ್ಲಲಾರೆವೆಂದು ತಿಳಿಯದಷ್ಟು ಮೂಢರಲ್ಲ ನಾವು. ನಮಗೂ ನಿಮಗೂ ಕೂಡಿಕೆ ಹೊಂದದು. ಅಷ್ಟೇ." ಎಂದನು. ಗಡೇಗುಡ್ಡನ ಮಾತು ಕೇಳಿ ಕೃಪಾಣಜಿತ್ತು





ವಿಗೆ ಭಯವಾಯಿತು. ಅವನು ಈ ಗುಂಪಿಗೆ ಸೇರುವ ಮೊದಲು, ಅರಣ್ಯದಲ್ಲಿ ಒಬ್ಬಂಟಿಗನಾಗಿ ಪಟ್ಟಕಷ್ಟ ಗಳೆಲ್ಲವೂ ನೆನಪಿಗೆ ಬಂದಿತು. ಈ ಸಮಯದಲ್ಲಿ ಎಷ್ಟೇ ಅಲ್ಪರಾದರೂ ಈ ಕುಳ್ಳಜನಾಂಗದ ಸಹಾಯ ವಿಲ್ಲದೆ ಹೋದರೆ, ತನ್ನ ಪ್ರಬಲ ಶತ್ರುವಾದ ಜಯ ಶೀಲನು ಬಹುಸುಲಭವಾಗಿ ತನ್ನನ್ನು ಈ ಗುಡ್ಡ ಗಾಡು ಪ್ರದೇಶದಲ್ಲಿ ಬೇಟೆಯಾಡಿಬಿಡುತ್ತಾನೆ.

ಹೀಗೆ ಆಲೋಚನೆ ಮಾಡಿ ಕೃಪಾಣಜಿತ್ತು ಗಡೇ ಗುಡ್ಡನೊಂದಿಗೆ ತುಂಬ ಮರ್ಯಾದೆಯ ಸೋಗು ತಂದುಕೊಂಡು, "ಅಯ್ಯಾ, ಗಡೇಗುಡ್ಡಾ, ನಿನಗೆ ನನ್ನಿಂದ ಮೇಲಾಗುತ್ತದೆಯೇ ಹೊರತು ಎಂದಿಗೂ ಕೆಡುಕಾಗದು. ನಿನ್ನ ಶತ್ರುವಾದ ಆ ರಾಣಿಯನ್ನೂ ಅವಳಿಗೆ ಸಹಾಯಕರಾಗಿರುವ ನನ್ನ ಶತ್ರುಗಳಿಬ್ಬ ರನ್ನೂ ನಾಳೆ ಸೂರ್ಯೋದಯವಾಗುವುದರೊಳಗೆ ಪರಲೋಕಕ್ಕೆ ಕಳುಹಿಸಿಬಿಡುತ್ತೇನೆ. ಈ ದಿನ ಮಧ್ಯ ರಾತ್ರಿಯ ಸಮಯದಲ್ಲಿ ನಿಮ್ಮಲ್ಲಿ ಕೆಲವರು ನನಗೆ ಸಹಾಯಕರಾಗಿ ಬರಲಿ. ಅವರು ಆ ರಾ… ಗೂಡಾರದ ಕಡೆಗೆ ಮುಂದೆ ನಡೆಯಲಿ. … ಆ ಶತ್ರುಗಳೆಲ್ಲರನ್ನೂ ನಿದ್ರೆಯಲ್ಲಿದ್ದ ಹಾಗೆಯೇ … ವಾನರದೊಂದಿಗೆ ಕೂಡಿ ನೆಲಕ್ಕೆ ಅರೆದುಬಿಡುತ್ತೇ… ಆಮೇಲೆ ನೀನು ಕಣ್ಣಿಗೆ ಕಾಣುವಷ್ಟು ದೂರ… ಕಾನನ ಪ್ರದೇಶಕ್ಕೆಲ್ಲಾ ಒಬ್ಬನೇ ರಾಜನಾಗು… ನಿನ್ನನ್ನು ಎದುರಿಸುವವರು ಆ ಮೇಲೆ ಯಾರ… ಇಲ್ಲ! ತಿಳಿಯಿತೇ? ಜೈ! ಗಡೇಗುಡ್ಡ ಕುಬ್ಜ ರಾ… ರಾಜನಿಗೆ!" ಎಂದು ಕೂಗಿ, ನರವಾನರವನ್ನು ಕತ್ತಿ… ಹಿಡಿಯಿಂದ ಬಲವಾಗಿ ಹೊಡೆದನು.

ನರವಾನರವು ನೋವಿನಿಂದ ಕೋಪದಿಂದ ಕರ್ಕ… ಸ್ವರದಿಂದ ಕೂಗಿ, ತನ್ನ ಕೋರೆ ಹಲ್ಲುಗಳ… ಹೊರಗೆ ತೋರಿಸಿ ಕೃಪಾಣಜಿತ್ತುವನ್ನು ಹಿಡಿಯ… ಕೈಗಳನ್ನು ಚಾಚಿ, ಅವನ ಕೈಯಲ್ಲಿರುವ ಕತ್ತಿಯ… ನೋಡಿ, ಹಿಂದಡಿಯಿಟ್ಟು ಗೊರ್ರೆಂದಿತು.

ಗಡೇಗುಡ್ಡನು ತೃಪ್ತಿಯಿಂದ ತಲೆಯೊಲಿ… "ಅಯ್ಯಾ ಮಹಾಕಾಯ! ನೀವು ನಿಮ್ಮ … ವಾನರವನ್ನು, ಇಷ್ಟು ಕ್ರೌರ್ಯಮಾಡದೆ … ದಯದಿಂದ ನೋಡಿದರೆ, ಅದು ಆಗಾಗ ನಿ… ಮೇಲೆ ತಿರುಗಿಬೀಳದೆ ಇದ್ದೀತು. ನಮಗೂ ಆಗ… ಹೆದರಿ ಬೀಳುವ ಪ್ರಸಂಗಬಾರದು." ಎಂದನು.

"ಈ ಸೇವಕ ಪ್ರಾಣಿಯನ್ನು ದಯೆಯಿ… ನೋಡಿದರೆ ಅಷ್ಟೇ! ಹಾಗೆ ಮಾಡಿಬಿಟ್ಟರೆ … ಮಾತ್ರದಲ್ಲಿ ಅದೇ ನನಗೆ ಯಜಮಾನನಾಗಿ… ತ್ತದೆ. ಈ ಲೋಕದಲ್ಲಿ ಪೆಟ್ಟಿಗೆ ಭಯಪಡದ ಪ್ರಾ… ಯಾವುದೂ ಇರಲಾರದು. ಸರಿ. ಈಗ ನಮ… ರಿಗೂ ಹೊಟ್ಟೆಗೆ ಆಗಬೇಕಲ್ಲ? ನಾನೀಗ … ಕುಟೀರಕ್ಕೆ ಹೋಗುತ್ತೇನೆ" ಎಂದು ಹೇಳಿ ಕೃಪಾ… ಜಿತ್ತು ಅಲ್ಲಿಂದ ಹೊರಟನು.

"ನಿಮ್ಮ ಊಟ ತಿಂಡಿಗಳೆಲ್ಲ ಅಲ್ಲಿ ಸಿದ್ಧವಾಗಿ…" ಎಂದ ಗಡೇಗುಡ್ಡ.

ಕೃಪಾಣಜಿತ್ತು ಆ ಕೇರಿಯಲ್ಲಿ ಇತರರ ಮನೆಗಳಿಗೆ ಸ್ವಲ್ಪ ದೂರದಲ್ಲಿರುವ ತನ್ನ ನಿವಾಸಸ್ಥಾನದ ಬಳಿಗೆ ಹೋಗಿ ತಿರುಗಿ ನೋಡಿ ದೊಡ್ಡ ಕಂಠಸ್ವರದಿಂದ, "ಸೂರ್ಯ ಮುಳುಗಿ, ಮಧ್ಯ ರಾತ್ರಿಯಾಗುವ ವರೆಗೂ ನನ್ನನ್ನು ಯಾರೂ ಎಬ್ಬಿಸಬೇಡಿ. ಆ ಮೇಲೆ ಬೆಳಗಾಗುವವರೆಗೂ ಎಚ್ಚರದಲ್ಲಿರಬೇಕಲ್ಲಾ? ನೆನಪಿರಲಿ, ಆ ಮಧ್ಯ ರಾತ್ರಿಯ ಹೊತ್ತಿಗೆ ನಿನ್ನ ಕಡೆಯವರು ಬರಲಿ; ಆಗಲೇ ನಾನು ಶತ್ರುಸಂಹಾರಕ್ಕೆ ಹೊರಡುವುದು!" ಎಂದನು.

ಗಡೇಗುಡ್ಡ ತೃಪ್ತಿಯಿಂದ ತಲೆಯಾಡಿಸಿ "ಆಗಲಿ" ಎಂದು ಕೂಗಿದ. ಆಮೇಲೆ ಸಣ್ಣ ನಗುವಿನೊಂದಿಗೆ ತನ್ನ ಸುತ್ತಲೂ ಸೇರಿದವರನ್ನು ನೋಡಿ, "ಆ ನರವಾನರವು ಅವನಿಗೆ ಅಪಾಯ ಬರುವಾಗ ಸಹಾಯಕ್ಕೇನೂ ಹೋಗುವುದಿಲ್ಲ. ಅದು ತಪ್ಪಿಸಿಕೊಂಡು ಸ್ವೇಚ್ಛೆಯಾಗಿ ಓಡಲಿಕ್ಕೇ ನೋಡುತ್ತಾದ್ದು. ಈ ಪರಿಸ್ಥಿತಿಯಲ್ಲಿ ಬೆಳಗಾಗುವುದರೊಳಗೆ ಶತ್ರು ಸಂಹಾರವಂತೆ! ಇವನದೇ ಸಂಹಾರ! ಮೊದಲು ಅವನ ಕತ್ತಿಯ ಸಮಾಚಾರ. ಅದನ್ನು ನಾವು ಸಪ್ಪಳಿಲ್ಲದೆ ಅಪಹರಿಸಿಬಿಡಬೇಕು" ಎಂದನು. ಆ ಕೆಲಸಕ್ಕೆ ತನ್ನ ಅನುಚರರಲ್ಲಿ ನಂಬಿಕಸ್ಥರೂ, ಧೈರ್ಯಶಾಲಿಗಳೂ ಆದ ನಾಲ್ಕು ಮಂದಿಯನ್ನು ಆರಿಸಿ ತನ್ನ ಮನೆಗೆ ಕರೆದುಕೊಂಡು ಹೋದನು.

ಆಮೇಲೆ ಎರಡು ಮೂರು ಗಂಟೆಗಳ ಕಾಲ ಯಾವ ಸದ್ದೂ ಇಲ್ಲದೆ ವಾತಾವರಣವೆಲ್ಲ ಬಿರುಗಾಳಿಗೆ ಮೊದಲಿರುವಂತೆ ಸ್ತಬ್ಧಮೌನವಾಗಿತ್ತು. ಹೊಟ್ಟೆ ತುಂಬ ತಿಂದು ಕುಡಿದು ಮಲಗಿ ಗೊರಕೆ ಹೊಡೆಯುತ್ತಿರುವ ಕೃಪಾಣಜಿತ್ತುವಿಗೆ ಹಠಾತ್ತಾಗಿ ಎಚ್ಚರಿಕೆಯಾಯಿತು.

"ಇದೆಂಥ ಎಣ್ಣೆಯ ಕಮಟು ವಾಸನೆಯಪ್ಪ!" ಎಂದು ಗೊಣಗುತ್ತ ಸುತ್ತಲೂ ಒಮ್ಮೆ ನೋಡಿ,



"ಯಾರಲ್ಲಿ ಹೊರಗೆ? ಏನೋ ಕೊಳಕು ಹರಳೆಣ್ಣೆ ವಾಸನೆ ಬರುತ್ತಿದೆಯಲ್ಲಾ? ಏನ್ಮಾಡ್ತೀರೋ?" ಎಂದು ಕೂಗಿ ಕೇಳಿದ.

ಅದಕ್ಕೆ ಒತ್ತರವಾಗಿ ಹೊರಗಿನಿಂದ, "ಅಯ್ಯಾ, ಮಹಾಕಾಯರೇ, ಅದು ಹರಳೆಣ್ಣೇವಾಸನೆಯಲ್ಲ. ಬೇವಿನ ಎಣ್ಣೆಯೊಂದಿಗೆ ಒಳ್ಳೆಯ ಬಂಗಾರದ ಬಣ್ಣದ ಎಳ್ಳೆಣ್ಣೆಯೂ ಬೆರೆತ ಮಿಶ್ರ ಎಣ್ಣೇ ಪರಿಮಳ. ಸೊಳ್ಳೆಗಳೂ ಕ್ರಿಮಿಕೀಟಗಳೂ ರಾತ್ರಿಯಲ್ಲಿ ನಿಮಗೆ ನಿದ್ರಾಭಂಗ ಮಾಡಬಾರದೂ ಅಂತ ನಮ್ಮ ನಾಯಕರು ನಿಮ್ಮ ಕುಟೀರದ ಮಾಡಿನ ತಾಳೆಯೋಲೆಗೂ ತಡಿಕೆಗಳಿಗೂ ಈ ಎಣ್ಣೆ ಹಚ್ಚಲು ಹೇಳಿದರು" ಎಂದು ಗಡೇಗುಡ್ಡನ ಅನುಚರನೊಬ್ಬ ಕೂಗಿ ಹೇಳಿದ.

"ಹಾಗೇನು! ಸರಿ, ಸರಿ!" ಎಂದು ಆಕಳಿಸಿ ಕೃಪಾಣಜಿತ್ತು ಮತ್ತೆ ನಿದ್ದೆಮತ್ತಿನಿಂದ ಕಣ್ಣುಗಳನ್ನು ಮುಚ್ಚಿಕೊಂಡನು. ಆ ಗುಡಿಸಲಿನ ನಡುವಿನಲ್ಲಿರುವ



ಬಲವಾದ ಕಂಬಕ್ಕೆ ಕಬ್ಬಿಣದ ಸಂಕಲೆಯಿಂದ ಬಂಧಿಸಲ್ಪಟ್ಟ ನರವಾನರವು ಮಾತ್ರ ಆ ವಾಸನೆಯನ್ನು ತಾಳಲಾರದೆ ಓಡಿಹೋಗುವ ಪ್ರಯತ್ನದಲ್ಲಿ ಅತ್ತಿತ್ತ ಗಿರಿಕೀ ಹೊಡೆಯುತ್ತ ಎಳೆದಾಡಿಕೊಂಡಿತ್ತು.

ಕೃಪಾಣಜಿತ್ತು ಮೈಮರೆತು ಗಾಢನಿದ್ರೆಯಲ್ಲಿ ಮುಳುಗಿಬಿಟ್ಟ. ಆ ಗುಡಿಸಲಿನ ಮುಂದೆ ಗಡೇಗುಡ್ಡನು ತನ್ನ ಅನುಚರರೊಂದಿಗೆ ಬಂದನು. ಅವನು "ಹುಂ" ಎಂದು ಸೈಗೆ ಮಾಡಿದ ಕೂಡಲೇ ಒಬ್ಬ ಕಳ್ಳನು ನಿಶ್ಶಬ್ದವಾಗಿ ಗುಡಿಸಲಿನ ಬಾಗಿಲು ದೂಡಿ ಒಳಗೆ ಹೋಗಿ, ಕೃಪಾಣಜಿತ್ತು ಗೋಡೆಗೆ ಒರಗಿಸಿಟ್ಟಿದ್ದ ಕತ್ತಿಯನ್ನು ಹೊತ್ತುಕೊಂಡು ಬೇಗ ಬೇಗನೆ ಹೊರಗೆ ಬಂದನು.

ಗಡೇಗುಡ್ಡನು ಆ ಕತ್ತಿಯನ್ನು ಅತ್ತಿತ್ತ ತಿರುಗಿಸಿ ನೋಡಿ, "ಆ ಮಹಾಕಾಯನ ನಿದ್ದೆಯು ಮತ್ತು ಗುಡಿಸಲಿನ ಮಾಡು ಸುಟ್ಟು ಮೈ ಮೇಲೆ ಬಿದ್ದ ಹೊರತು ಇಳಿಯದು. ಈ ಕತ್ತಿಯನ್ನು ನಾವು ಹೊರಬಲ್ಲೆವೇ ಹೊರತು ಆಯುಧವಾಗಿ ಉಪಯೋಗಿಸಲಾರೆವು. ನಮಗಿದು ಯಾವ ಪ್ರಯೋಜನಕ್ಕೂ ಬಾರದು. ಆದರೂ ಬಿಸುಡಬೇಡಿ, ಇದನ್ನು ಎಲ್ಲಿಯಾದರೂ ಅಡಗಿಸಿಟ್ಟುಬಿಡಿ" ಎಂದು ಆ ಕತ್ತಿಯನ್ನು ಅನುಚರರಿಗೆ ಕೊಟ್ಟನು.

ಆಮೇಲೆ ಈ ಮೊದಲೇ ಹೇಳಿಟ್ಟಂತೆ ಬಲ್ಲೆಗಳನ್ನು ಹಿಡಿದಿದ್ದ ವೀರ ಕುಳ್ಳಯೋಧರನೇಕರು ಅಲ್ಲಿಗೆ ಬಂದರು. ಅವರಲ್ಲಿ ಕೆಲವರು ಟಗರಿನ ರಾಹುತರಾಗಿಯೂ ಇದ್ದರು. ಗಡೇಗುಡ್ಡನು ಅವರನ್ನೆಲ್ಲ ಒಂದುಸಾರಿ ನೋಡಿ, "ಹುಂ, ಇನ್ನು ನಮ್ಮ ಸಾವೋ ಆ ದುಷ್ಟಮಹಾಕಾಯನ ಸಾವೋ ಎರಡರಲ್ಲೊಂದು ಆಗಿಯೇಬಿಡಲಿ. ಈ ಗುಡಿಸಲು ಮನೆಗೆ ಎಲ್ಲಾ ದಿಕ್ಕುಗಳಲ್ಲಿಯೂ ಒಂದೇಬಾರಿಗೆ ಬೆಂಕಿ ಹಚ್ಚಿರಿ. ಅವನು ಜೀವದೊಂದಿಗೆ ಹೊರಗೆ ಬಂದರೆ ಬಲ್ಲೆಯಿಂದ ತಿವಿಯಿರಿ. ನರವಾನರವು ಬಹುಶಃ ಕಬ್ಬಿಣದ ಸಂಕಲೆ ಕಡಿದುಕೊಂಡು ಹೊರಗೆ ಬರಲಾರದು. ಅದು ಅಲ್ಲೇ ಬೆಂಕಿಯಲ್ಲಿ ಸುಟ್ಟುಬೆಂದು ಸಾಯುತ್ತದೆ. ಹುಂ" ಎಂದನು.

ನಾಯಕನ ಅಪ್ಪಣೆಯಾದ ಕೂಡಲೇ ಕುಳ್ಳಭಟರು ನಾಲ್ವರು ಉರಿಯುವ ಕೊಳ್ಳಿಯನ್ನು ತೆಗೆದುಕೊಂಡು ಗುಡಿಸಲಿನ ಎಲ್ಲಾ ಭಾಗಗಳಿಗೂ ಬೆಂಕಿ ಹಚ್ಚಿಬಿಟ್ಟರು. ಎಣ್ಣೆಯಿಂದ ನೆನೆದಿರುವ ಒಣಗಿದ ತಾಳೆಯೋಲೆಯ ಗುಡಿಸಲಿನ ಮಾಡು ಒಮ್ಮೆಗೇ ಚಟಚಟನೆ ಹತ್ತಿಕೊಂಡು ಭಗಭಗನೆ ಉರಿಯ ತೊಡಗಿ ದೊಡ್ಡ ಬೆಂಕಿಯ ಕೆನ್ನಾಲಗೆಗಳು ಮೇಲೇಳತೊಡಗಿದುವು.

ಒಂದೆರಡು ಕ್ಷಣಗಳಲ್ಲಿ ಗಢದ್ದು ನಿದ್ದೆಯಲ್ಲಿ ಕೃಪಾಣಜಿತ್ತುವಿನ ಶರೀರವೆಲ್ಲ ಭಗ್ಗನೆ ಉರಿಯುಂತಾಗಿ ಧಿಗ್ಗನೆ ಹಾರಿ ಎದ್ದ. ಕಣ್ಣುಬಿಡಿಸಿದಾಗ ತಾನಿರುವ ಗುಡಿಸಲು ಮನೆ ಉರಿಯುವುದನ್ನು ತಿಳಿದು ಪ್ರಾಣಭಯದಿಂದ ಕೆಟ್ಟದನಿ ತೆಗೆದು ಕ

"ಮೋಸ! ಓ! ಬಿಡಲಾರೆ, ಸಾಯುವವರೆಗೂ ಪ್ರತೀಕಾರ ಮಾಡದೆ ಬಿಡಲಾರೆ!" ಎಂದು ಅತ್ತಿತ್ತ ಎಗರಾಡುತ್ತ ತನ್ನ ಕತ್ತಿಗಾಗಿ ಹುಡುಕಿದ. ಅದು ಇರಬೇಕಾದಲ್ಲಿ ಇರಲಿಲ್ಲ. ಮೇಲಿನಿಂದ ಆಚೆ ಈಚೆ ಬದಿಗಳಿಂದ ಬೆಂಕಿಯು ಮಾಲೆಗಳು ಉದುರುತ್ತಿವೆ! ಕೃಪಾಣಜಿತ್ತು ಗಡಗಡ ನಡುಗುತ್ತ ಅತ್ತಿತ್ತ ಕುಣಿಯುತ್ತ ಏನು ಮಾಡಲೆಂದು ಯೋಚಿಸುವಷ್ಟರಲ್ಲಿ ಉರಿಯುತ್ತಿರುವ ತಾಳೆಯೋಲೆಯೊಂದು ಅವನ ಮೇಲೆ ಬಿತ್ತು. ನರವಾನರವು ಒಂದುಸಾರಿ ಭೀಕರವಾಗಿ ಅರಚಿ ಬಲವಾಗಿ ಎಳೆದಾಗ, ಅದರ ನಡುವಿಗೆ ಬಿಗಿದಿದ್ದ ಕಬ್ಬಿಣದ ಸಂಕಲೆ ತುಂಡಾಯಿತು. ಅದು ಕೃಪಾಣಜಿತ್ತುವನ್ನು ಹಿಡಿಯಲು ಹೋಗಿ, ಸುತ್ತಲೂ ಆಕ್ರಮಿಸುವ ಬೆಂಕಿಗೆ ಹೆದರಿ, ಮುಚ್ಚಿಕೊಂಡಿದ್ದ ಬಾಗಿಲಿನ ಕಡೆಗೆ ಓಡಿತು.

ಇನ್ನು ತನಗೆ ಮರಣವೇ ಗತಿಯೆಂದುಕೊಂಡ ಕೃಪಾಣಜಿತ್ತು ಭಯದಿಂದುಂಟಾದ ಆವೇಶದಲ್ಲಿ ನರವಾನರದ ಸೊಂಟದಲ್ಲಿ ನೇತಾಡುತಿದ್ದ ಕಬ್ಬಿಣದ ಸಂಕಲೆಯ ತುಂಡನ್ನು ಹಿಡಿದುಕೊಂಡನು. ಅದೇ ಸಮಯದಲ್ಲಿ ವಾನರವು ಒಂದೇ ಉಸಿರಿಗೆ ಓಡಿ ದ್ವಾರಬಂಧಗಳನ್ನು ಮುರಿದು ಹೊರಕ್ಕೆ ಹಾರಿತು. ಅದರೊಂದಿಗೆ ಅಂಟಿಕೊಂಡಿದ್ದ ಕೃಪಾಣಜಿತ್ತು ಕೂಡಾ ಹೊರಕ್ಕೆ ಬಂದುಬಿದ್ದ. ಆ ಸಮಯಕ್ಕೆ ಸಂಕಲೆಯಿಂದ ಅವನ ಕೈಜಾರಿ ನರವಾನರವು ಮುಕ್ತವಾಗಿ ಮುಂದೆ ಓಡಿತು.

ಹಠಾತ್ತಾಗಿ ನರವಾನರವೂ ಅದರ ಹಿಂದೆ ಕೃಪಾಣಜಿತ್ತೂ ಉರಿಯುವ ಗುಡಿಸಲಿನೊಳಗಿನಿಂದ ಹೊರಗೆ ಬಿದ್ದುದನ್ನು ನೋಡಿ ಗಡೇಗುಡ್ಡನೂ ಅವನ ಅನುಚರರೂ ತುಂಬ ಹೆದರಿದರು. ಆದರೆ ಈಗ ಕೃಪಾಣಜಿತ್ತು ನಿರಾಯುಧನಾಗಿದ್ದಾನೆ. ನರವಾನರವಂತೂ ಸಮಯಸಿಕ್ಕಿದರೆ ಕಾಡಿನೊಳಗೆ ಓಡುವ ಪ್ರಾಣಿ!

ಅಂತೆಯೇ ಗಡೇಗುಡ್ಡ ಧೈರ್ಯವನ್ನು ತಂದುಕೊಂಡು, ಹೆದರಿಕೆಯಿಂದ ಓಡಲು ನೋಡುತ್ತಿದ್ದ ತನ್ನ ಅನುಚರರಿಗೆ ಧೈರ್ಯ ಹೇಳುತ್ತ "ನರವಾನ



ರಕ್ಕೆ ಏನೂ ಮಾಡಬೇಡಿ! ಅದರ ಪಾಡಿಗೆ ಓಡಲಿ. ಈ ದುಷ್ಟನನ್ನು ಮಾತ್ರ ಬಿಡಬೇಡಿ. ಇದೇ ಸಮಯ! ಬಲ್ಲೆಗಳಿಂದ ಚುಚ್ಚಿ ಕೊಂದೇಬಿಡಿ. ಹೆದರಬೇಡಿ!" ಎಂದು ಕೂಗಿ ಹೇಳಿದನು.

ನಾಯಕನ ಬಾಯಿಯಿಂದ ಹೊರಟ ಗಟ್ಟಿ ಉತ್ಸಾಹದ ಮಾತು ಕೇಳಿ ಕುಳ್ಳವೀರರಿಗೆಲ್ಲಾ ಧೈರ್ಯ ಬಂದಿತು. ಆಗಲೇ ನರವಾನರವು ದೊಡ್ಡದನಿಯಿಂದ ಅರಚಿ ಸುಮ್ಮನೆ ಓಡುವುದನ್ನು ಬಿಟ್ಟು ಕೈಗೆ ಸಿಕ್ಕಿದ ಕುಳ್ಳರನ್ನು ಹಿಡಿದು ಅತ್ತಿತ್ತ ತಿರುಗಿಸಿ ಬಿಸುಡತೊಡಗಿತು. ಅವರಲ್ಲಿ ಕೆಲವರು ಓಡಿಹೋಗಲು ನೋಡಿದರೆ, ಕೆಲವರು ಅದನ್ನಿದಿರಿಸಿ ಬಲ್ಲೆಗಳಿಂದ ತಿವಿಯುತ್ತಿದ್ದರು.

ಈ ಗಲಾಟೆ ಕೃಪಾಣಜಿತ್ತುವಿಗೆ ಒಳ್ಳೆಯ ಅವಕಾಶ ಕಲ್ಪಿಸಿದಂತಾಯಿತು. ಅವನು ಏನಾದರೂ ಆಯುಧ ಸಿಗುವುದೋ ಎಂದು ಅತ್ತಿತ್ತ ನೋಡಲು, ಒಂದು ಕಡೆಯಲ್ಲಿ ಒಣಗಿದ ಉದ್ದವಾದೊಂದು ಮರದ ಕೊಂಬೆ ಕಾಣಿಸಿತು. ಅವನು ಅದನ್ನು ಕೈಗೆತ್ತಿಕೊಂಡು ಭೀಕರವಾಗಿ ಕೂಗಿ ಅಬ್ಬರಿಸುತ್ತ ಗಡೇಗುಡ್ಡನ ಅನುಚರರನ್ನು ಸಿಕ್ಕಾಬಟ್ಟೆ ಹೊಡೆಯತೊಡಗಿದನು. ಕುಳ್ಳವೀರರು ಕೂಡಾ ಪ್ರಾಣದ ಮೇಲಿನ ಆಸೆಬಿಟ್ಟು ಕೃಪಾಣಜಿತ್ತುವಿನೊಂದಿಗೆ ತಮ್ಮ ಬಲ್ಲೆಗಳಿಂದ ಹೋರಾಡತೊಡಗಿದರು. ಆ ಕುಳ್ಳವೀರರ ಬಲ್ಲೆಯುದ್ಧ ಅತ್ಯದ್ಭುತವಾಗಿತ್ತು. ಅಷ್ಟೊಂದು ಕರಾಮತಿಯಿಂದ ಯಂತ್ರವೇಗದಲ್ಲಿ ಬಲ್ಲೆ ತಿರುಗಿಸಿ ತಿವಿಯುವವರನ್ನು ಕೃಪಾಣಜಿತ್ತು ಆದುವರೆಗೂ ನೋಡಿರಲಿಲ್ಲ. ಅವರ ಬಲ್ಲೆಗಳಿಂದ ಅವನ ಸರ್ವಾಂಗವೂ ಗಾಯಗಳಾಗಿ ರಕ್ತಕಾರ ಹತ್ತಿತು. ಕೃಪಾಣಜಿತ್ತು ಬದುಕುವ ಆಶೆಬಿಟ್ಟ.

ಈ ಕುಳ್ಳಜನಾಂಗದ ಕೇರಿಯಲ್ಲಿ, ಆ ರಾತ್ರಿಯ ಹೊತ್ತಿನಲ್ಲಿ ಉರಿಯುವ ಬೆಂಕಿ, ಏಳುವ ಹೊಗೆ, ಹೊರಡುವ ಕೂಗಾಟ, ಅರಚಾಟ, ಆರ್ತನಾದಗಳನ್ನು ಕೇಳುತ್ತಾ ತುಸು ದೂರದಲ್ಲಿ ಇಬ್ಬರು ವಿಚಿತ್ರಮನುಷ್ಯರು ಸುಮ್ಮನಿದ್ದರು. ಅವರು ಕುದುರೆಗಳ ರೂಪದಲ್ಲಿದ್ದ ಎರಡು ಅದ್ಭುತ ಪ್ರಾಣಿಗಳ ಮೇಲೆ ಕುಳಿತುಕೊಂಡಿದ್ದರು. ಆ ವಾಹನ ಪ್ರಾಣಿಗಳ ಶರೀರಗಳು ಮೀನಿನ ಪೊರೆಗಳಂತೆ ಕಾಣುತ್ತಿದ್ದಿತು. ಮಕರಕೇತುವಿನ ವಾಹನವಾದ ಜಲಗ್ರಹದ ಜಾತಿಯ ಕುದುರೆಗಳಂತೆ ಅವೂ ಇದ್ದುವು. ಅವುಗಳ ಮೇಲೆ ಕುಳಿತವರು ಸಮುದ್ರ ಪ್ರಾಣಿಯ ಚರ್ಮದಿಂದ ಹೊಲಿದ ದುಸ್ತುಗಳನ್ನು ಧರಿಸಿದ್ದರು. ಅವರ ನಡುವಿನಲ್ಲಿ ಉದ್ದವಾದ ಕತ್ತಿಗಳು ನೇತಾಡುತ್ತಿದ್ದುವು. ಇಬ್ಬರೂ ಮಾತಾಡದೆ ಆ ಅಗ್ನಿಕಾಂಡದ ಹಾಹಾಕಾರದ ಕಡೆಗೇ ನೋಡುತ್ತಿದ್ದರು.

(ಮುಂದುವರಿಯುವುದು)






# ವೀರಹನುಮಾನ್

೩೧. ರಾಮಲಕ್ಷ್ಮಣರ ಸಂರಕ್ಷಣೆ

ಹನುಮಂತನು ಸೂಕ್ಷ್ಮರೂಪದಲ್ಲಿ ಯಾವ ಆತಂಕವೂ ಇಲ್ಲದೆ, ಬಲವಾದ ಕಾವಲಿನವರಾರಿಗೂ ಗೊತ್ತಾಗದಂತೆ ಪಾತಾಳಲಂಕೆಯ ಸಿಂಹದ್ವಾರವನ್ನು ದಾಟಿ ನಗರದೊಳಗೆ ಪ್ರವೇಶಿಸಿದನು. ನಾಲ್ಕು ದಿಕ್ಕುಗಳನ್ನೂ ಪರೀಕ್ಷಿಸುತ್ತ ಅವನು ಸಾಗುತ್ತಿರಲು, ಒಂದು ದಿಕ್ಕಿನಿಂದ ದೊಡ್ಡ ಕೋಲಾಹಲ ಶಬ್ದ ಕೇಳಿ ಬರುತ್ತಿದ್ದಿತು. ಹನುಮಂತನು ಆ ದಿಕ್ಕಿಗೇ ಬೇಗಬೇಗನೆ ಹೋದನು.

ಅಲ್ಲೊಂದು ಕಡೆ ಮಹಾಪರ್ವತದ ಗುಹೆಯನ್ನು ಅದ್ಭುತವಾದ ಶಿಲ್ಪಗಳಿಂದ ಕೊರೆದು ಪ್ರವೇಶ ದ್ವಾರಮಂಟಪವನ್ನಾಗಿ ಮಾಡಿದ್ದರು. ಆ ಗುಹೆಯನ್ನೇ ಸುಂದರವಾಧ ಕಾಳಿಕಾಲಯವನ್ನಾಗಿ ಮಾಡಲಾಗಿತ್ತು. ಆಲಯದ ಪ್ರಾಂಗಣವೆಲ್ಲಾ ತಳಿರು ತೋರಣಗಳಿಂದ ಅಲಂಕೃತವಾಗಿತ್ತು. ಸಾಲು ಸಾಲಾಗಿ ಮಣಿದೀಪಗಳೂ ಸರದೀಪಗಳೂ ಬೆಳಗುತ್ತ ಸುತ್ತಲೂ ದಿವ್ಯಕಾಂತಿಯನ್ನು ಪಸರಿಸುತ್ತಿದ್ದುವು. ಕೇಳಿದವರ ಮೈಮನಗಳನ್ನು ಅಲುಗಾಡಿಸುವ ವಾದ್ಯಮೇಳ ಧ್ವನಿಗಳು. ಮೈರಾವಣನ ಸೇವಕರು ಮದ್ಯ ತುಂಬಿದ ಕೊಡಗಳನ್ನು ಸಾಲಾಗಿ ಒಂದರಮೇಲೊಂದಾಗಿ ಪೇರಿಸಿಟ್ಟಿದ್ದರು. ಅನೇಕ ಸೇವಕರು ಮದ್ಯಪಾನದಿಂದ ಮೈಮರೆತು ಆವೇಶದಿಂದ ಹಾಡುತ್ತ ಧುಮುಕಿ ಧುಮುಕಿ ಕುಣಿಯುತ್ತ ದೊಡ್ಡ ಕೋಲಾಹಲ ಮಾಡುತ್ತಿದ್ದರು.

ಆಲಯದ ಇದಿರಿನಲ್ಲಿ ಢಕ್ಕೆ ಡಮರು ಡಿಂಡಿಮ ಕೊಂಬು ಕಹಳೆ ಮೊದಲಾದುವು ಜೋರಾಗಿ ಶಬ್ದಿಸತೊಡಗಿದುವು. ಅಲ್ಲಿನವರ ಮಾತುಕತೆಗಳಿಂದ ರಾಮಲಕ್ಷ್ಮಣರನ್ನು ಬೆಳಗಾದ ಕೂಡಲೇ ಕಾಳಿಗೆ ಬಲಿಕೊಡುತ್ತಾರೆಂದು ಹನುಮಂತನಿಗೆ ಗೊತ್ತಾಯಿತು. ಅವನು ಹಲ್ಲಿಯ ಮರಿಯಂತಹ ಸೂಕ್ಷ್ಮರೂಪದಲ್ಲಿ ಕಾಳಿಕಾಲಯದ ಗರ್ಭಗುಡಿಯ ಮೇಲು ಭಾಗಕ್ಕೆ ಹೋದನು. ಅಲ್ಲಿಂದಲೇ ಕಾಳೀವಿಗ್ರಹದ ತಲೆಯ ಮೇಲೆ ಅಭಿಷೇಕಗಳನ್ನು ಸುರಿಯುವ ಬಿಂದಿಗೆಗಳನ್ನು ಸಿದ್ಧಪಡಿಸಿ ಸಾಲಾಗಿಟ್ಟಿದ್ದರು. ವಿಗ್ರಹದ ತಲೆಗೆ ಸರಿಯಾಗಿ ಗುಂಡಗಿನ ರಂಧ್ರವಿದ್ದಿತು. ಹನು



31-1



ಮಂತನು ಆ ರಂಧ್ರದೊಳಗಿನಿಂದಾಗಿ ಗರ್ಭಗೃಹದೊಳಗೆ ಧುಮುಕಿದನು.

ಅದರೊಳಗೆ ಯಾರೂ ಇರಲಿಲ್ಲ. ನಂದಾದೀಪದ ಬೆಳಕಿನಲ್ಲಿ ಕಾಳೀವಿಗ್ರಹವು ಬಹಳ ಎತ್ತರವಾಗಿ ಉಗ್ರಸ್ವರೂಪದಲ್ಲಿರುವುದನ್ನು ನೋಡಿದನು. ವಿಗ್ರಹದ ಮುಂದೆ ಹೊಸ ಹೊಸ ಬಿಲ್ಲುಗಳೂ ಬಾಣಗಳೂ ಇದ್ದುವು. ಹನುಮಂತನು ವಿಗ್ರಹದ ಮುಂದೆ ನಿಂತು, "ಓ! ಮಹಾಕಾಳೀ! ನೀನು ರಾಮಲಕ್ಷ್ಮಣರನ್ನು ಬಲಿಯಾಗಿ ಸ್ವೀಕರಿಸುವಿಯಾ?" ಎಂದು ಕೋಪದಿಂದ ಗರ್ಜಿಸಿ ಕೇಳಿದನು.

ಆಗ ಕಾಳೀದೇವಿ ಸೌಮ್ಯರೂಪದಿಂದ ಅವನಿಗೆ ಪ್ರತ್ಯಕ್ಷಳಾಗಿ, "ಹನುಮಂತಾ! ಮೈರಾವಣನ ಆಯುಷ್ಯತೀರುವ ಹೊತ್ತು ಸಮೀಪಿಸಿತು. ನಿನಗೆ ಜಯವಾಗುತ್ತದೆ ಸಂದೇಹ ಪಡಬೇಡ" ಎಂದು ಆಶೀರ್ವಾದ ಮಾಡಿ ಅಂತರ್ಧಾನಳಾದಳು. ಕಾಳೀದೇವಿಯ ಅಭಯವಾಣಿಯನ್ನು ಕೇಳಿ ಹನುಮಂತನಿಗೆ ಬಹಳ ಸಂತೋಷವಾಯಿತು. ಅವನು ಗರ್ಭಗುಡಿಯ ಬಾಗಿಲನ್ನು ಹಾಕಿ ಕಾಳೀವಿಗ್ರಹದ ಹಿಂಭಾಗದ ಕತ್ತಲೆಯಲ್ಲಿ ಅಡಗಿಕೊಂಡು ಮುಂದೆ ನಡೆಯಲಿರುವುದನ್ನು ನಿರೀಕ್ಷಿಸತೊಡಗಿದನು.

ಅದೇ ವೇಳೆಯಲ್ಲಿ ಮೈರಾವಣನ ಅಂತಃಪುರದ ರಾಣೀವಾಸದಲ್ಲಿ ತುಂಬಾ ಗದ್ದಲದ ಕಾರ್ಯಕ್ರಮಗಳು ನಡೆಯುತ್ತಿದ್ದುವು. ಅಲ್ಲಿ ರಾಮಲಕ್ಷ್ಮಣರ ಬಲಿ ನೆರವೇರಿದ ಕೂಡಲೇ ಮೈರಾವಣನಿಗೆ ಚಂದ್ರಸೇನೆಯೊಂದಿಗೆ ನಡೆಯ ಬೇಕಾದ ವಿವಾಹಕ್ಕಾಗಿ ಭಾರೀ ಭಾರೀ ಸನ್ನಾಹಗಳು ನಡೆಯುತ್ತಿದ್ದುವು. ಎಲ್ಲದಕ್ಕೂ ಅಲ್ಲಿಯ ನಾಯಕಿಯಾದ ಕಂಟಕಿ ಎಂಬ ರಾಕ್ಷಸಿಯದೇ ಅಧಿಕಾರ. ಅವಳ ಆಜ್ಞೆಯಂತೆ ಸೇವಕಿಯರು ಚಂದ್ರಸೇನೆಗೆ ಅಲಂಕಾರ ಮಾಡುತ್ತಲಿದ್ದರು. ಮಧ್ಯೆ ಮಧ್ಯೆ ಕಂಟಕಿ ಅವಳನ್ನು ತಿವಿದು ಕುಟ್ಟಿ ಬುದ್ಧಿಹೇಳುತ್ತ, ಮೈರಾವಣನ ದೊಡ್ಡಸ್ತಿಕೆಯನ್ನು ಕೊಚ್ಚುತ್ತ ಅಧಿಕಾರ ನಡೆಸುತ್ತಿದ್ದಳು.

ಭವನದ ಮುಂದೆ ದೊಡ್ಡ ಕೋಲಾಹಲ ಕಿವಿಗಳನ್ನು ಗಡಚಿಕ್ಕಿಸತೊಡಗಿತು. ರಾಮಲಕ್ಷ್ಮಣರು ಪ್ರತಿಮೆಗಳ ಆಕಾರದಿಂದ ನಿಜಸ್ವರೂಪಕ್ಕೆ ಬದಲಾಯಿಸಲ್ಪಟ್ಟರು. ಆಮೇಲೆ ಅವರಿಬ್ಬರನ್ನೂ ಒಂದು ಬಂಡಿಯಲ್ಲಿ ಏರಿಸಿದರು. ಉದ್ದವಾದ ದಪ್ಪದ ಮರದ ತುಂಡುಗಳಿಗೆ ಅವರನ್ನು ಹಗ್ಗಗಳಿಂದ ಬಿಗಿದು ಕಟ್ಟಿದರು. ಅವರ ಶರೀರಗಳನ್ನು ಕೆಂಬಣ್ಣದ ದಾಸವಾಳ ಹೂಗಳಿಂದ ಅಲಂಕರಿಸಲ್ಪಟ್ಟಿತ್ತು. ಮಾನವರಂತೆ ಕೈಕಾಲುಗಳಿರುವ ಭೂತಸರ್ಪಗಳು ಬಂಡಿಯನ್ನು ಎಳೆಯುತ್ತಿದ್ದುವು. ಈ ಚೆಂದದಲ್ಲಿ ರಾಕ್ಷಸರು ಅಟ್ಟಹಾಸ ಮಾಡುತ್ತ ರಾಮಲಕ್ಷ್ಮಣರನ್ನು ಮೆರವಣಿಗೆ ಮಾಡಿಕೊಂಡು ಕಾಳಿಕಾಲಯಕ್ಕೆ ಒಯ್ಯುತ್ತಿದ್ದರು. ಆ ಸಮಯದಲ್ಲಿ ರಾಕ್ಷಸರಿಂದ ಒಮ್ಮೆಲೇ ಹೊರಟ ದೊಡ್ಡ ಶಬ್ದ



ವನ್ನು ಕೇಳಿ, ಅದರ ಕಾರಣವನ್ನು ಊಹಿಸಿದ ಚಂದ್ರಸೇನೆ ಆತ್ಮಾವೇಶದಿಂದ ಚೀರಿ ಹಾರಿ ಕಂಟಕಿ ಅಡಗಟ್ಟುವುದರೊಳಗೇ ಮಿಂಚಿನವೇಗದಿಂದ ಬೀದಿಗೆ ಓಡಿದಳು. ಅಲ್ಲಿ ಅರಸಿನ ಬಟ್ಟೆಗಳನ್ನುಟ್ಟು, ಮುಖ ಕೈಲ್ಲಾ ಸಿಂಧೂರಲೇಪಿಸಲ್ಪಟ್ಟ ರಾಮಲಕ್ಷ್ಮಣರು ಅವಳ ಕಣ್ಣಿಗೆ ಬಿದ್ದರು. "ಹಾ ರಾಮಾ!" ಎಂದು ಚೀರಿ ತಲೆ ತಿರುಗಿ ದಡಾಲ್ಲನೆ ಬಿದ್ದು ಮೂರ್ಛಿತೆ ಯಾದಳು ಚಂದ್ರಸೇನೆ.

ಚಂದ್ರಸೇನೆಯ ಹಿಂದೆಯೇ ಬಂದ ಕಂಟಕಿ, ಅವಳು ಚೀರಿಬಿದ್ದುದನ್ನು ನೋಡಿ, ಅತ್ಯಂತ ಸಿಟ್ಟಿನಿಂದ ಹಲ್ಲುಕಡಿದು ಕಣ್ಣು ಹೊರಳಿಸುತ್ತ, ಬಾಯಿಗೆ ಬಂದ ಬೈಗುಳನ್ನುಪಯೋಗಿಸಿ ಕೊರಡೆಯಿಂದ ಕೈದಣಿಯೆ ಚಂದ್ರಸೇನೆಯನ್ನು ಹೊಡೆಯತೊಡಗಿದಳು. ಆದರೆ ಚಂದ್ರಸೇನೆಯಲ್ಲಿ ಚಲನೆಯೇ ಬಾರದಿರಲು ಬೇಸತ್ತು ಅವಳನ್ನು ಹೊತ್ತುಕೊಂಡು ಹೋಗಿ ಭವನದೊಳಗಿನ ಒಂದು ಕೋಣೆಯೊಳಗೆ ಹಾಕಿ ಬಂಧಿಸಿಟ್ಟಳು.

ಕಂಟಕಿಯ ಅಧಿಕಾರ ಎಲ್ಲಿಯುವರೆಗಿತ್ತೆಂದರೆ, ಅವಳು ಕಾಳಿಕಾದೇವಿಯ ಪಾದತೀರ್ಥ ಪ್ರಧಾನ ಪೂಜಾರಿಣಿಯಾಗಿದ್ದಳು. ಅಂತೆಯೇ ಅವಳು ಆಲಯದ ಕೆಲಸಕ್ಕಾಗಿ ಅಲ್ಲಿಗೆ ಓಡಿದಳು. ಮೈರಾವಣನಿಗಾದರೂ ಸರಿಯೆ ಅವನ ಅಣ್ಣ ಅಹಿರಾವಣನಿಗಾದರೂ ಸರಿಯೆ, ದೇವಿಯ ಪಾದತೀರ್ಥವೆಂದು ಕರೆಯಲ್ಪಡುವ ಮದ್ಯವನ್ನು ಕಂಟಕಿಯ ಕೈಯಿಂದಲೇ ಎರೆಸಿಕೊಂಡು ಸೇವಿಸಬೇಕಾಗಿತ್ತು.

ಅವಳ ಆಜ್ಞೆಯಂತೆ ಉಪಪೂಜಾರಿಗಳಾದ ರಾಕ್ಷಸರು ಗರ್ಭಾಲಯದ ಮೇಲುಭಾಗಕ್ಕೆ ಹೋಗಿ ಕಾಳೀ ವಿಗ್ರಹದ ಮೇಲೆ ಮದ್ಯವನ್ನು ಅಭಿಷೇಕಿಸಲು ಪ್ರಾರಂಭಿಸಿದರು. ಗುಂಡಗಿನ ರಂಧ್ರದ ಮೂಲಕ ಧಾರೆಯಾಗಿ ಬೀಳುವ ಮದ್ಯವನ್ನು ನೋಡಿ ಹನುಮಂತನು ಅಸಹ್ಯಪಟ್ಟನು.

ಆಗ ಅವನು ಗರ್ಭಗೃಹದೊಳಗಿನ ಎತ್ತರದಷ್ಟೇ ತನ್ನ ದೇಹವನ್ನು ಬೆಳೆಸಿ, "ಇನ್ನು ಮದ್ಯವನ್ನು ನಿಲ್ಲಿಸಿ ಹಾಲಿನ ಅಭಿಷೇಕ ಮಾಡಿರಿ!" ಎಂದು ಕಾಳೀ ದೇವಿ ಮಾತಾಡಿದಂತೆಯೇ ಸೌಮ್ಯಗಂಭೀರ ಸ್ವರದಿಂದ ಕೂಗಿದನು. ಅದು ಪ್ರತಿಧ್ವನಿಯೊಂದಿಗೆ ವಿಚಿತ್ರವಾಗಿ ಕೇಳಿಸಿತು.

ಆ ಶಬ್ದ ಕೇಳಿದ ಕೂಡಲೇ ದೇವಾಲಯದ ಹೊರಗೆ ಅಬ್ಬರಿಸಿಕೊಂಡಿದ್ದ ಕೋಲಾಹಲ ಧ್ವನಿ ಒಮ್ಮೆಗೇ ನಿಂತುಹೋಯಿತು. ಕಾಳಿ ಮದ್ಯಾಭಿಷೇಕ ಸಾಕೆಂದು ಹೇಳಿದುದು ಎಲ್ಲರಿಗೂ ಆಶ್ಚರ್ಯಕರವಾಗಿತ್ತು. ವಿಗ್ರಹದ ಪಾದದ ಹತ್ತಿರವಿರುವ ಸೋಮಸೂತ್ರದ ಮೂಲಕ ತೀರ್ಥಕುಂಡದಲ್ಲಿ ಬೀಳುವ ಮದ್ಯವನ್ನು ಕುಡಿಯಲು, ಪಾನಪಾತ್ರಗಳೊಂದಿಗೆ ರಾಕ್ಷಸಪರಿವಾರವು ಸಿದ್ಧವಾಗಿದ್ದಿತು. ಅವರೆಲ್ಲರಿಗೂ ಅದು ದೊಡ್ಡ ಆಶಾಭಂಗವಾಗಿತ್ತು. ಹನುಮಂತನ ಆ ಶಬ್ದ ರಾಮಲಕ್ಷ್ಮಣರ ಕಿವಿಗೂ



31-3



ಬಿದ್ದಿತ್ತು. ಬಂಡಿಯಲ್ಲಿ ಬಂಧಿಸಲ್ಪಟ್ಟ ರಾಮನು ಲಕ್ಷ್ಮಣನ ಮುಖವನ್ನು ನೋಡಿ ಸಣ್ಣಗೆ ಮಂದಹಾಸ ಬೀರಿದನು.

ಕಾಳೀದೇವಿಯಿಂದ ಹೊರಟ ಆ ಶಬ್ದವನ್ನು ಕೇಳಿ ಕಂಟಕಿ ದಿಗಿಲಿನಿಂದ ಮೈರಾವಣನ ಮುಖವನ್ನು ನೋಡಿದಳು. ಮೈರಾವಣನು ಅತಾಶ್ಚರ್ಯದಿಂದ ಕಣ್ಣುಗಳನ್ನು ದೊಡ್ಡದಾಗಿ ಅರಳಿಸಿ ಪಕ್ಕದಲ್ಲಿದ್ದ ಅಹಿರಾವಣನನ್ನು ನೋಡಿದನು.

ಅಹಿರಾವಣನು ತಲೆದೂಗುತ್ತ, "ತಮ್ಮಾ, ಮೈರಾವಣಾ, ಇದರಲ್ಲಿ ಆಶ್ಚರ್ಯಪಡುವಂಥಾದ್ದು ಏನೂ ಇಲ್ಲ. ರಾಮಲಕ್ಷ್ಮಣರು ಸಾತ್ವಿಕಮೂರ್ತಿಗಳಲ್ಲವೇ ? ಅಂಥವರನ್ನು ಬಲಿಗೊಳ್ಳುವಾಗ ಮಹಾಮಾತೆ ಸಾತ್ವಿಕಾಭಿಷೇಕವನ್ನೇ ಬಯಸುತ್ತಾಳೆ. ಆಗ ತಾನೇ ಒಂದಕ್ಕೊಂದು ಸರಿಯಾಗಿ ಹೊಂದುತ್ತದೆ. ಅವಳ ಚಿತ್ತದಂತೇ ಮಾಡಿಸು." ಎಂದನು.

"ಹೌದಣ್ಣಾ ! ಬಹಳ ಚೆನ್ನಾಗಿ ಹೇಳಿದೆ. ನಿತ್ಯವೂ ದೇವೀಪಾದತೀರ್ಥವನ್ನು ಸೇವಿಸುತ್ತ ಅವಳ ಧ್ಯಾನದಲ್ಲೇ ಇರುವ ನಿನ್ನ ಹಾಗೆ ಬೇರೆಯವರಿಗೆ ಅವಳ ಅಂತರ್ಯವು ತಿಳಿದೀತೇ ?" ಎಂದು ಮೈರಾವಣನು ಅಹಿರಾವಣನನ್ನು ಮೆಚ್ಚಿಕೊಂಡು ದೇವಿಗೆ ಹಾಲಿನ ಅಭಿಷೇಕ ಮಾಡುವಂತೆ ರಾಕ್ಷಸರಿಗೆ ಅಪ್ಪಣೆ ಕೊಟ್ಟನು.

ರಾಕ್ಷಸರು ದೊಡ್ಡದೊಡ್ಡ ಪಾತ್ರೆಗಳಲ್ಲಿ ಹಾಲು ತಂದು ಕಾಳೀದೇವಿಗೆ ಅಭಿಷೇಕ ಮಾಡಲು ತೊಡಗಿದರು. ಬೃಹದಾಕಾರನಾದ ಹನುಮಂತನು ಮೇಲಿನಿಂದ ಬೀಳುವ ಕ್ಷೀರಧಾರೆಗೆ ಸರಿಯಾಗಿ ತನ್ನ ಬಾಯಿಯನ್ನು ತೆರೆದುಕೊಂಡು ಗಟಗಟನೆ ಕುಡಿಯ ತೊಡಗಿದನು. ಅವನಿಗೆ ಉತ್ಸಾಹವೂ ಬಲವೂ ಅಭಿವೃದ್ಧಿಯಾಯಿತು.

ಸ್ವಲ್ಪಹೊತ್ತಿಗೆ ಅಭಿಷೇಕ ಮುಗಿಯಿತು. ಮೈರಾವಣನು ಉತ್ಸಾಹದಿಂದ ಗರ್ಭಗುಡಿಯ ಮುಂದೆ ಹೋಗಿ ಮುಂಡುಗಾಲೂರಿ ಕುಳಿತು ಕೈಜೋಡಿಸಿ, "ಕಾಳೀಮಾತೆಯೇ ! ಇನ್ನು ನಿನ್ನ ದರ್ಶನಕ್ಕೆ ಅನುಜ್ಞೆ ಕೊಡು. ಎಲ್ಲರೂ ಕಾದಿದ್ದೇವೆ !" ಎಂದು ಪ್ರಾರ್ಥಿಸಿದನು.

ಅದಕ್ಕೆ ಉತ್ತರವಾಗಿ ಒಳಗಿನಿಂದ ಗಂಭೀರಸ್ವರ ಹೊರಟಿತು : "ಮೈರಾವಣನೇ ! ಮೊದಲು ನಿನ್ನ ಅಣ್ಣ ಅಹಿರಾವಣನು ಫಲಪುಷ್ಪನೈವೇದ್ಯಗಳೊಂದಿಗೆ ಅರ್ಚನೆಗೆ ಬರಲಿ !"

ಮೈರಾವಣನು ತನ್ನ ಅಣ್ಣನ ಬಳಿಗೆ ಬಂದು, "ಅಣ್ಣಾ, ಮಾತೆಗೆ ನಿನ್ನ ಮೇಲೆ ಬಹಳ ಪ್ರೀತಿ. ಅವಳು ಮೊದಲು ನಿನ್ನನ್ನೇ ಅರ್ಚನೆಗೆ ಕರೆಯುತ್ತಾಳೆ. ಹೋಗಣ್ಣಾ !" ಎಂದನು.

ಅಹಿರಾವಣನು ಪರ್ವತದಂತಹ ತನ್ನ ದೇಹವನ್ನು ಅತ್ತಿತ್ತ ಓಲಾಡಿಸುತ್ತ ಫಲಪುಷ್ಪ, ಭಕ್ಷ್ಯಗಳು, ಬಂಗಾರದ ಪಾತ್ರದಲ್ಲಿ ಮಧು ಮುಂತಾದುವನ್ನು ತೆಗೆದುಕೊಂಡು ಗರ್ಭಗುಡಿಯ ಬಾಗಿಲ

ಬಳಿಗೆ ಹೋದನು. ಹನುಮಂತನು ಮುಚ್ಚಿರುವ ಬಾಗಿಲಿನ ಹತ್ತಿರವೇ ನಿಂತಿದ್ದನು. ಅಹಿರಾವಣನು ಬಾಗಿಲನ್ನು ಮೊಣಕೈಯಿಂದ ದೂಡಿ, ಒಳಗೆ ಪ್ರವೇಶಿಸಿದ ಕೂಡಲೇ ಹನುಮಂತನು ಬದಿಗೆ ಸರಿದು ತಟಕ್ಕನೆ ಬಾಗಿಲು ಮುಚ್ಚಿ ತಾಳಜಡಿದನು.

ಅಹಿರಾವಣನು ಉಸಿರುಬಿಡುವುದರೊಳಗೆ ಹನುಮಂತನ ಕೈಗಳು ಅವನ ಕುತ್ತಿಗೆಯನ್ನು ಇಕ್ಕಳದಂತೆ ಹಿಡಿದಾಗಿತ್ತು. ನೈವೇದ್ಯಪದಾರ್ಥಗಳನ್ನು ಕೆಳಗಿಡಲು ಬಾಗಿದ್ದಂತೆಯೇ ಉಸಿರು ನಿಂತು ಶಬ್ದವಿಲ್ಲದೆಯೇ ಅಹಿರಾವಣನ ಕಥೆ ಮುಗಿಯಿತು.

ತರುವಾಯ ಹನುಮಂತನು ಸುತ್ತಲೂ ಒಮ್ಮೆ ನೋಡಿ, ಅಹಿರಾವಣನ ಕಳೇಬರವನ್ನು ಗರ್ಭಗುಡಿಯ ಕತ್ತಲೆಯ ಮೂಲೆಗೆ ಒದ್ದು ಝಾಡಿಸಿ ಅದೇ ಸೌಮ್ಯಗಂಭೀರ ಧ್ವನಿಯಿಂದ, "ಮೈರಾವಣಾ, ಈಗ ರಾಮಲಕ್ಷ್ಮಣರನ್ನು ಒಳಗೆ ಕಳುಹಿಸು. ನನ್ನ ಪ್ರಿಯಭಕ್ತನಾದ ಅಹಿರಾವಣನು ಮಂತ್ರವನ್ನು ಹೇಳಿ ಅವರ ಕೈಯಿಂದಲೇ ನನ್ನನ್ನು ಅರ್ಚನೆ ಮಾಡಿಸಬೇಕು" ಎಂದು ಕೂಗಿ ಹೇಳಿ, ಬಾಗಿಲಿನ ತಾಳವನ್ನು ತೆಗೆದಿಟ್ಟನು.

ಅದರಂತೆ ಮೈರಾವಣನು "ನಿನ್ನ ಚಿತ್ತದೇವಿ!" ಎನ್ನುತ್ತ ರಾಮಲಕ್ಷ್ಮಣರನ್ನು ಗರ್ಭಗುಡಿಯೊಳಗೆ ದೂಡಿದನು. ಕಾಳೀವಿಗ್ರಹದ ಹಿಂದೆ ಅಡಗಿದ್ದ ಹನುಮಂತನು ಸಣ್ಣ ಸ್ವರದಿಂದ "ರಘುವೀರರೇ, ಮೊದಲು ಬಾಗಿಲು ಮುಚ್ಚಿ ತಾಳಹಾಕಿ ತಯಾರಾಗಿರಿ" ಎಂದನು ಕಾಳಿಯೇ ಹೇಳಿದಂತೆ.

ಆ ಮಾತನ್ನು ಕೇಳಿ ಲಕ್ಷ್ಮಣನು ಆಶ್ಚರ್ಯದಿಂದ ರಾಮನನ್ನು ನೋಡಿದನು. ರಾಮನು ಮಂದಹಾಸ ಮಾಡಿ "ಇನ್ನೂ ನಿನಗೆ ಅರ್ಥವಾಗಲಿಲ್ಲವೇ? ಮೊದಲು ಬಾಗಿಲು ಭದ್ರಪಡಿಸು" ಎಂದನು.

ಲಕ್ಷ್ಮಣನು ಬಾಗಿಲು ಮುಚ್ಚಿ ತಾಳಜಡಿದ ಕೂಡಲೇ, "ಇನ್ನು ವಿಗ್ರಹದ ಹಿಂದೆ ಬನ್ನಿ" ಎಂಬ



ಮಾತು ಹೊರಟಿತು. ರಾಮಲಕ್ಷ್ಮಣರು ಕಾಳೀವಿಗ್ರಹದ ಹಿಂದೆ ಹೋಗಿ ಹನುಮಂತನನ್ನು ನೋಡಿ ಆತ್ಮಾನಂದಗೊಂಡರು. ಲಕ್ಷ್ಮಣನು ಇನ್ನೂ ಸಂದೇಹದಿಂದಿರುವುದನ್ನು ನೋಡಿ ರಾಮನು, "ಲಕ್ಷ್ಮಣಾ ಕಾಳೀದೇವಿ ತನಗೆ ಮದ್ಯದ ಅಭಿಷೇಕ ಬೇಡವೆಂದಾಗಲೇ ಗರ್ಭಗುಡಿಯಲ್ಲಿ ನಮ್ಮ ಹನುಮಂತನಿರುವನೆಂದು ನನಗೆ ಗೊತ್ತಾಯಿತು" ಎಂದನು.

ಅಷ್ಟರಲ್ಲಿ ರಾಮನಿಗೆ ನಮಸ್ಕಾರ ಮಾಡಿ ಎದ್ದ ಹನುಮಂತನು ರಾಮಲಕ್ಷ್ಮಣರಿಗೆ ಕಾಳೀವಿಗ್ರಹದ ಮುಂದೆ ಪೂಜಿಸಲಿಕ್ಕಾಗಿ ಇಟ್ಟಿದ್ದ ಹೊಸ ಬಿಲ್ಲುಗಳನ್ನೂ, ಬಾಣಗಳು ತುಂಬಿದ ತೂಣೀರಗಳನ್ನೂ ತೋರಿಸಿದನು. ರಾಮಲಕ್ಷ್ಮಣರು ಉತ್ಸಾಹದಿಂದ ಬಿಲ್ಲುಬಾಣಗಳನ್ನು ತೆಗೆದುಕೊಂಡರು. ಹನುಮಂತನು ತನ್ನ ಶರೀರವನ್ನು ಬೆಳೆಸಿ ರಾಮಲಕ್ಷ್ಮಣರನ್ನು ಭುಜಗಳ ಮೇಲೆ ಏರಿಸಿಕೊಂಡು, ವಿಗ್ರಹದ ಮುಂದೆ ರಾಕ್ಷಸರಿಗಾಗಿ ಒಟ್ಟಿದ್ದ ಅಷ್ಟೂ ಬಾಣ



ಗಳನ್ನೂ ಕಟ್ಟುಕಟ್ಟಿ ಎತ್ತಿಕೊಂಡನು. ಆ ವೇಳೆಯಲ್ಲಿ ಗರ್ಭಾಲಯದ ಹೊರಗೆ ರಾಕ್ಷಸರು ಭಾರಿ ಕೋಲಾಹಲ ಮಾಡಿಕೊಂಡಿದ್ದರು. ಅವರಿಗೆ ರಾಮಲಕ್ಷ್ಮಣರ ಬಲಿಯನ್ನು ನೋಡಬೇಕೆಂದು ತುಂಬಾ ಆತುರವಾಗಿತ್ತು. ಬಲಿಗೆ ಗೊತ್ತು ಮಾಡಲ್ಪಟ್ಟ ಮುಹೂರ್ತ ದಾಟಿ ಹೋಗುತ್ತಿರಲು, "ಅಹಿರಾವಣಾ, ಅರ್ಚನೆ ಮುಗಿಸಿ ಬೇಗ ಬಾಗಿಲು ತೆರೆಯಿರಿ!" ಎಂದು ಕೆಲವರು ಕೂಗಿದರು. ಆದರೂ ಗರ್ಭಗುಡಿಯೊಳಗೆ ಯಾವ ಸದ್ದೂ ಕೇಳಿ ಬರಲಿಲ್ಲ. ಅಹಿರಾವಣನು ಏಕೆ ಬಾಗಿಲು ತೆರೆಯಲಿಲ್ಲ?

ಗರ್ಭಗುಡಿಯಲ್ಲಿ ಏನೋ ಮೋಸ ನಡೆದಿದೆ ಎಂಬ ಅನುಮಾನವು ಮೊದಲು ಕಂಟಕಿಗೆ ಮಿಂಚಿತು. ಆ ರಾಕ್ಷಸಿ ಬಾಗಿಲ ಸಂದಿನಿಂದ ಒಳಕ್ಕೆ ನೋಡಿದಳು. ಅವಳಿಗೆ ಅಭಿಷೇಕವಾದ ಸೂಚನೆಯೋ, ಅಹಿರಾವಣನು ರಾಮಲಕ್ಷ್ಮಣರಿಂದ ಅರ್ಚನೆ ಮಾಡಿಸುವ ಚಲನೆಯೋ ಕಂಡು ಬರಲಿಲ್ಲ. ಹಾಗಾದರೆ ಗರ್ಭಗುಡಿಯೊಳಗೆ ಯಾವನೋ ಅಪಾಯಕಾರಿಯಾದ ಶತ್ರುವು ಸೇರಿರಬೇಕು!

ಈ ಆಲೋಚನೆ ಬಂದ ಕೂಡಲೇ ಕಂಟಕಿ ಕೆಟ್ಟ ದನಿಯಿಂದ "ಹೋ!" ಎಂದು ಅರಚಿದಳು. ರಾಕ್ಷಸರು ಅವಳ ಸುತ್ತಲೂ ಕೂಡಿ, "ಏಕೆ ಹಾಗೆ ಕೂಗುವಿ? ನಿನಗೇನಾಯಿತು? ಒಳಗೆ ಏನನ್ನು ನೋಡಿದಿ? ಕಾಳೀಮಾತೆ ನಿನ್ನನ್ನೇ ಬಲಿ ಕೋರಿದಳೇ?" ಎಂದು ಮುಂತಾಗಿ ಕೇಳಿದರು.

ಕಂಟಕಿ ಕಂಪಿಸುತ್ತ ಇನ್ನಷ್ಟು ಕೆಟ್ಟ ಸ್ವರದಿಂದ, "ಅಯ್ಯೋ! ಮಂದಮತಿಗಳೇ! ನಮ್ಮ ಕಣ್ಣೆದಿರೇ ದೊಡ್ಡ ಮೋಸವಾಗಿದೆ. ನಮ್ಮ ರಹಸ್ಯಗಳನ್ನು ಶತ್ರುಗಳಿಗೆ ತಿಳಿಸುವುದಕ್ಕೆ ಅವಳೊಬ್ಬಳ ಹೊರತು ಬೇರೆ ಯಾರೂ ಇಲ್ಲ. ಆ ಚಂದ್ರಸೇನೆಯ ಶರೀರವನ್ನು ಹಣ್ಣು ಮಾಡಿದ ಹೊರತು ಗುಟ್ಟು ಹೊರಗೆ ಬಾರದು" ಎಂದು ಹೇಳಿ ಚಂದ್ರಸೇನೆ ಬಂಧಿಸಲ್ಪಟ್ಟ ಮಂದಿರದ ಕಡೆಗೆ ಓಡಿದಳು.

ಕಂಟಕಿಯ ಮಾತುಗಳನ್ನು ಕೇಳಿ ರಾಕ್ಷಸರೆಲ್ಲ ಭೀತರಾಗಿ ಒಬ್ಬರ ಮುಖವನ್ನೊಬ್ಬರು ನೋಡತೊಡಗಿದರು. ಏನಿರಬಹುದು ಒಳಗೆ? ಶತ್ರುವೆಂದರೆ ಯಾರಾಗಿರಬಹುದು? ಹೇಗೆ ಬಂದಿರಬಹುದು? ಆ ಕಂಟಕಿ ಕೂಗಿದ ಹಾಗೆ ಗರ್ಭಗುಡಿಯೊಳಗೆ, ಶತ್ರುವೆಂದರೇನು? ಮೈರಾವಣನು ಪಾಲಿಸುವ ಈ ಪಾತಾಳ ಲಂಕೆಯೊಳಗೆ ಪ್ರವೇಶಿಸಬಲ್ಲ ಶತ್ರು ಯಾರವನು?

ಮೈರಾವಣನು ಸೇವಕರಾಕ್ಷಸರನ್ನು ನೋಡಿ ಗರ್ಭಾಲಯದ ಬಾಗಿಲನ್ನು ತೆರೆಯುವಂತೆ ಆಜ್ಞಾಪಿಸಿದನು. ಕೆಲಮಂದಿ ಧೈರ್ಯಶಾಲಿಗಳಾದ ರಾಕ್ಷಸರು ಗರ್ಭಗೃಹದ ಬಾಗಿಲ ಬಳಿಗೆ ನಡೆದರು. ಅವರು ಬಾಗಿಲಿನ ಮೇಲೆ ಕೈಹಾಕುವುದರೊಳಗೆ, ಒಳಗಿದ್ದ ಹನುಮಂತನು, ಬೆಟ್ಟಗಳು ನಡುಗುವ ಹಾಗೆ ಸಿಂಹನಾದ ಮಾಡಿ, ಬಾಗಿಲು ಮುರಿದು

ಹಾರುವ ಹಾಗೆ ಕಾಲಿನಿಂದ ಒದ್ದು ಹೊರಗೆ ಬಂದನು. ಈ ಆಘಾತಗಳಿಂದ ಅನೇಕ ರಾಕ್ಷಸರು ಮಗುಚಿ ಬಿದ್ದರು.

ಉಗ್ರಹನುಮಂತನನ್ನು ನೋಡಿದ ಕೂಡಲೇ ರಾಕ್ಷಸರ ಸಮೂಹದಿಂದ "ಮೋಸ! ಮೋಸ! ಘಾತ! ಘಾತ!" ಎಂಬ ಕೂಗುಗಳೆದ್ದುವು. ಹೊರಗೆ ಬಂದ ಕ್ಷಣದಿಂದಲೂ ಹನುಮಂತನ ಭುಜದ ಮೇಲಿದ್ದ ರಾಮಲಕ್ಷ್ಮಣರು ಎಡೆಬಿಡದೆ ಬಾಣದ ಮಳೆಯನ್ನೇ ಸುರಿಸತೊಡಗಿದರು. ರಾಕ್ಷಸರು ಹಾಹಾಕಾರ ಮಾಡುತ್ತ ಚೆಲ್ಲಾಚೆದರಾಗಿ ಓಡಿ ಹೋಗುತ್ತಿದ್ದರು; ಸಾಯುತ್ತಿದ್ದರು.

ಕಾಳಿಕಾಲಯದ ಮುಂದೆ ನಿಂತಿದ್ದ ಮೈರಾವಣನು ಅಲ್ಲಿಂದ ಹೊರಬಿದ್ದ ಕೋಪೋಗ್ರ ಹನುಮಂತನನ್ನೂ, ಅವನ ಭುಜದ ಮೇಲೆ ಧನುರ್ಧಾರಿಗಳಾಗಿ ವಿಜೃಂಭಿಸುವ ರಾಮಲಕ್ಷ್ಮಣರನ್ನೂ ನೋಡಿ, ಬೇರೆ ಉಪಾಯವಿಲ್ಲದೆ ಹೂಂಕಾರ ಮಾಡಿ, ತಾನೂ ಯುದ್ಧಸನ್ನದ್ಧನಾದನು. ಅವನ ಕೈಯಲ್ಲಿಯೂ ಭಾರೀಬಿಲ್ಲು ಎದ್ದಿತು. ತೀವ್ರವಾದ ಕಣೆಗಳನ್ನು ಪ್ರಯೋಗಿಸತೊಡಗಿದನು.

ರಾಮಲಕ್ಷ್ಮಣರು ಇಮ್ಮಡಿ ಉತ್ಸಾಹದಿಂದ ಮೈರಾವಣನ ಮೇಲೆ ಬಾಣಗಳನ್ನು ಪ್ರಯೋಗಿಸಿದರು. ಆ ಬಾಣಗಳ ಪೆಟ್ಟಿನಿಂದಾದ ಗಾಯಗಳಿಂದ ನೆಲಕ್ಕೆ ಬಿದ್ದ ಒಂದೊಂದು ರಕ್ತದ ಬಿಂದುವಿನಿಂದಲೂ ಒಬ್ಬೊಬ್ಬ ಮೈರಾವಣನಂತೆ ಎದ್ದು ಯುದ್ಧಮಾಡಲಾರಂಭಿಸಿದರು. ಅವರು ಕೂಡಾ ಮೈರಾವಣನಂತೆಯೇ ಹುಂಕಾರಮಾಡಿ ರಾಮಲಕ್ಷ್ಮಣರ ಮೇಲೆ ಬಾಣ ಪ್ರಯೋಗ ಮಾಡುತ್ತಿದ್ದರು. ಹೀಗೆ ಅನೇಕ ಮಂದಿ ಮೈರಾವಣರೆದ್ದರು.

ಇದನ್ನು ನೋಡಿ ಆಶ್ಚರ್ಯಚಕಿತರಾದ ರಾಮಲಕ್ಷ್ಮಣರು ಹನುಮಂತನೊಂದಿಗೆ, "ಹನುಮಂತಾ, ಇದೇನು ವಿಚಿತ್ರ! ಇಷ್ಟುಮಂದಿ ಮೈರಾವಣರನ್ನು ರಕ್ತದ ಬಿಂದು ನೆಲಕ್ಕೆ ಬೀಳದಂತೆ ವಧಿಸುವುದು ಹೇಗೆ?" ಎಂದರು.

ಆಗ ಹನುಮಂತನಿಗೆ ಸುವರ್ಚಲಾದೇವಿ ಹೇಳಿದಂತೆ ಚಂದ್ರಸೇನೆಯು ನೆನಪು ಬಂದಿತು. ಹನುಮಂತನು ಒಂದೆರಡು ಮಾತಿನಲ್ಲಿ, ಆ ಸಂಗತಿಯನ್ನು ರಾಮಲಕ್ಷ್ಮಣರಿಗೆ ಹೇಳಿ, ರಿವ್ವನೆ ಆಕಾಶಕ್ಕೆ ಹಾರಿ ರಾಮಲಕ್ಷ್ಮಣರನ್ನು ಎತ್ತರವಾದೊಂದು ಬೆಟ್ಟದ ಮೇಲೆ ಇಳಿಸಿದನು. ಅಲ್ಲಿಂದ ಹನುಮಂತನು ಚಂದ್ರಸೇನೆಯ ಮಂದಿರದ ಕಡೆಗೆ ವೇಗವಾಗಿ ಓಡಿದನು. ರಾಮಲಕ್ಷ್ಮಣರು ಆ ಪರ್ವತದ ಮೇಲೆ ನಿಂತು, ಲಕ್ಷಸಂಖ್ಯೆಯಲ್ಲಿ ಹುಟ್ಟಿ ಬಂದಿದ್ದ ಮೈರಾವಣರ ಗುಂಪಿನ ಮೇಲೆ ಒಂದೇಸಮನೆ ಬಾಣ ಪ್ರಯೋಗ ಮಾಡಿಕೊಂಡಿದ್ದರು.

